KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಜೂನ್ ೧೫, ೨೦೦೬ (ಜೇಷ್ಠ ೨೫, ಶಕ ವರ್ಷ ೧೯೨೮) | ಸಂಚಿಕೆ ೨೪ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

**ಅಧಿಸೂಚನೆ**

**ಸಂಖ್ಯೆ:ಆಕುಕ 07 ಐಎಂಎಂ 2006, ಬೆಂಗಳೂರು, ದಿನಾಂಕ:6ನೇ ಫೆಬ್ರವರಿ, 2006**

ಔಷಧ ನಿಯಂತ್ರಣ ಇಲಾಖೆಯ ಸ್ಥಳ ನಿರೀಕ್ಷಣೆಯಲ್ಲಿ ಶ್ರೀ ರಾಜಶೇಖರಮಲ್ಲಿ ಸಹಾಯಕ ಔಷಧ ನಿಯಂತ್ರಕರು ಇವರನ್ನು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಚಾಮರಾಜನಗರ ವೃತ್ತ, ಚಾಮರಾಜನಗರ, ಇಲ್ಲಿ ಖಾಲಿ ಇರುವ ಸಹಾಯಕ ಔಷಧ ನಿಯಂತ್ರಕರ ಹುದ್ದೆಗೆ ಸ್ಥಳನಿಯುಕ್ತಿಗೊಳಿಸಿ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ.ಬಿ. ಗಣಾಚಾರಿ**

ಪಿ.ಆರ್.505

ಸರ್ಕಾರದ ಅಧೀನ ಕಾರ್ಯದರ್ಶಿಗಳು,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

### ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ದೊಡ್ಡಬಳ್ಳಾಪುರ ಉಪವಿಭಾಗ, ದೊಡ್ಡಬಳ್ಳಾಪುರ

**ಸಂಖ್ಯೆ:ಸನಿ 47: ವಿ.ನೇ: 69:05-06, ದಿನಾಂಕ:10ನೇ ಫೆಬ್ರವರಿ, 2006**

**ವಿಷಯ:** ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ (ನಿ), ಕಾಡತಿಪ್ಪೂರು, ದೊಡ್ಡಬಳ್ಳಾಪುರ ತಾಲ್ಲೂಕು, ಸಂಘಕ್ಕೆ ಕಲಂ 31(1)ರಡಿ ವಿಶೇಷಾಧಿಕಾರಿಗಳನ್ನು ನೇಮಕ ಮಾಡುವ ಬಗ್ಗೆ.

**ಉಲ್ಲೇಖ:** (1) ಶ್ರೀ ಸಿ. ನಂಜಯ್ಯ, ನಿರ್ದೇಶಕರು, ಇವರ ರಾಜೀನಾಮೆ ದಿನಾಂಕ:20.01.2006.

(2) ವ್ಯವಸ್ಥಾಪಕರು, ವ್ಯ.ಸೇ.ಸ.ಬ್ಯಾಂಕ್ (ನಿ), ಕಾಡತಿಪ್ಪೂರು, ದೊಡ್ಡಬಳ್ಳಾಪುರ ತಾಲ್ಲೂಕು, ಇವರ ಪತ್ರ ದಿನಾಂಕ: 06.02.2006.

(3) ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ: 69: ಸಿ2ಎಂ: 2001, ದಿನಾಂಕ: 21.11.2001.

**ಪ್ರಸ್ತಾವನೆ:**

ಕಾಡತಿಪ್ಪೂರು ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ (ನಿ), ದೊಡ್ಡಬಳ್ಳಾಪುರ ತಾಲ್ಲೂಕು, ಇದರ ಆಡಳಿತ ಮಂಡಳಿಯ 5 ಜನ ಸದಸ್ಯರಲ್ಲಿ ಒಬ್ಬರು ತಮ್ಮ ಸ್ಥಾನಕ್ಕೆ ರಾಜೀನಾಮೆ ನೀಡಿರುವುದರಿಂದ, ಸಮಿತಿ ಸದಸ್ಯರ ಸಂಖ್ಯೆಯು ಸಭೆಯ ಅವಶ್ಯಕತೆ ಸಂಖ್ಯೆ (ಕೋರಂ)ಗೆ ಅಗತ್ಯವಾದಷ್ಟು ಸಂಖ್ಯೆಯಲ್ಲಿ ಇಲ್ಲದೆ ಶೂನ್ಯವಾಗಿರುವುದರಿಂದ ಕಲಂ 31(1) ರಡಿ ಸದರಿ ಬ್ಯಾಂಕಿಗೆ ವಿಶೇಷಾಧಿಕಾರಿಯ ನೇಮಕ ಅವಶ್ಯಕತೆ ಎಂದು ಪರಿಗಣಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಆದೇಶ**

ವಿ. ಗಂಗಾಧರಪ್ಪ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರ ಉಪವಿಭಾಗ, ದೊಡ್ಡಬಳ್ಳಾಪುರ, ಆದ ನಾನು, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 31(1)ರ ಪ್ರಕಾರ ಹಾಗೂ ಉಲ್ಲೇಖಿತ (3)ರ ಸರ್ಕಾರದ ಅಧಿಸೂಚನೆಯನ್ವಯ ದತ್ತವಾದ

ಅಧಿಕಾರವನ್ನು ಚಲಾಯಿಸಿ, ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ (ನಿ), ಕಾಡತಿಪ್ಪೂರು, ದೊಡ್ಡಬಳ್ಳಾಪುರ ತಾಲ್ಲೂಕು ಬ್ಯಾಂಕಿಗೆ ವಿಶೇಷಾಧಿಕಾರಿಗಳನ್ನಾಗಿ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿನ ವೃತ್ತ ಮೇಲ್ವಿಚಾರಕರಾದ ಶ್ರೀ ರಾಜಣ್ಣ ಇವರನ್ನು ನೇಮಕ ಮಾಡಿರುತ್ತೇನೆ.

ವಿಶೇಷಾಧಿಕಾರಿಗಳು ಈ ಆದೇಶದ ದಿನಾಂಕದಿಂದ 6 ತಿಂಗಳ ಅವಧಿಯೊಳಗೆ ಬ್ಯಾಂಕಿನ ಆಡಳಿತ ಮಂಡಳಿಗೆ ಚುನಾವಣೆ ನಡೆಸಿ, ಹೊಸದಾಗಿ ರಚಿತವಾಗುವ ಆಡಳಿತ ಮಂಡಳಿಗೆ ಅಧಿಕಾರ ವಹಿಸಿಕೊಡಲು ಆದೇಶಿಸಿದೆ.

ವಿಶೇಷಾಧಿಕಾರಿಗಳು ಬ್ಯಾಂಕಿನ ಆಡಳಿತ ಮಂಡಳಿಯ ಪ್ರಭಾರವನ್ನು ವಹಿಸಿಕೊಂಡು ಆಡಳಿತ ಮಂಡಳಿಯ ಎಲ್ಲಾ ಕರ್ತವ್ಯಗಳನ್ನು ಸಹಕಾರ ಸಂಘಗಳ ಕಾಯ್ದೆ ನಿಯಮ ಮತ್ತು ಬ್ಯಾಂಕಿನ ಉಪ ನಿಯಮಗಳ ಪ್ರಕಾರ ಕಾರ್ಯನಿರ್ವಹಿಸಲು ಆದೇಶಿಸಿದೆ. ವಿಶೇಷಾಧಿಕಾರಿಗಳು ಈ ಕಛೇರಿಯ ನಿಯಂತ್ರಣಕ್ಕೆ ಒಳಪಟ್ಟು ಕೆಲಸ ನಿರ್ವಹಿಸುವುದು. ವಿಶೇಷಾಧಿಕಾರಿಗಳ ಅಧಿಕಾರ ಅವಧಿಯು ಆಡಳಿತ ಮಂಡಳಿಗೆ ಅಧಿಕಾರ ವಹಿಸಿಕೊಡುವ ಅಥವಾ ಈ ಅವಧಿಯ ದಿನಾಂಕದಿಂದ 6 ತಿಂಗಳ ಒಳಗೆ ಅವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆವಿಗೂ ಜಾರಿಯಲ್ಲಿರುತ್ತದೆ.

ಈ ಆದೇಶವನ್ನು ಈ ದಿನ 10ನೇ ಫೆಬ್ರವರಿ 2006ರಂದು ಈ ಕಛೇರಿಯ ಮುದ್ರೆ ಹಾಗೂ ನನ್ನ ಸಹಿಯೊಂದಿಗೆ ನೀಡಲಾಗಿರುತ್ತದೆ.

**ವಿ. ಗಂಗಾಧರಪ್ಪ**

ಪಿ.ಆರ್.506

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ದೊಡ್ಡಬಳ್ಳಾಪುರ ಉಪವಿಭಾಗ, ದೊಡ್ಡಬಳ್ಳಾಪುರ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

## ಅಧಿಸೂಚನೆ

### ಸಂಖ್ಯೆ:ಸಿಆಸುಇ 38 ಸಅಸೇ 2006, ಬೆಂಗಳೂರು, ದಿನಾಂಕ:3ನೇ ಫೆಬ್ರವರಿ, 2006

**ಸರ್ಕಾರಿ ಅಧಿಸೂಚನೆ ಸಂಖ್ಯೆ: ಜಿಎಸ್ 76 ಜಿಒಬಿ 2004 (ಭಾ), ದಿನಾಂಕ: 28.01.2006** ರನ್ವಯ ಶ್ರೀ ಎನ್. ಧರ್ಮಸಿಂಗ್, ಮುಖ್ಯಮಂತ್ರಿ ಇವರು ನೀಡಿದ ರಾಜೀನಾಮೆಯನ್ನು ಘನವೆತ್ತ ರಾಜ್ಯಪಾಲರು ಅಂಗೀಕರಿಸಿರುವ ಪ್ರಯುಕ್ತ ರನ್ವಯ ಮುಖ್ಯಮಂತ್ರಿಗಳ: ಮಂತ್ರಿಗಳ: ರಾಜ್ಯಮಂತ್ರಿಗಳ ಕಾರ್ಯಾಲಯಗಳಲ್ಲಿ ನಿಯೋಜನೆ: ಗುತ್ತಿಗೆ ಆಧಾರದ ಮೇಲೆ ಸೇವೆ ಸಲ್ಲಿಸಿರುವ ಈ ಕೆಳಕಂಡ ಗ್ರೂಪ್ 'ಎ' ಅಧಿಕಾರಿಗಳ ಸೇವೆಯನ್ನು ಈ ಕೂಡಲೇ ಜಾರಿಗೆ ಬರುವಂತೆ ಅವರುಗಳ ಹೆಸರುಗಳ ಮುಂದೆ ಸೂಚಿಸಿರುವ ಅವರುಗಳ ಮಾತೃ ಇಲಾಖೆಗೆ ಹಿಂದಿರುಗಿಸಲಾಗಿದೆ; ಹಾಗೂ ಗುತ್ತಿಗೆ ಆಧಾರದ ಮೇಲೆ ನೇಮಕಗೊಂಡಿರುವ ಅಧಿಕಾರಿಗಳ ಗುತ್ತಿಗೆ ಆಧಾರದ ನೇಮಕಾತಿಯನ್ನು ಸಂಬಂಧಪಟ್ಟ ಸಚಿವರ ಅಧಿಕಾರ ಮುಗಿದ ತಕ್ಷಣದಿಂದ ಜಾರಿಗೆ ಬರುವಂತೆ ಕೊನೆಗೊಳಿಸಲಾಗಿದೆ.

ಈ ಅಧಿಕಾರಿಗಳು ಕರ್ತವ್ಯದಿಂದ ಬಿಡುಗಡೆ ಹೊಂದುವ ಮೊದಲು ದಿನಾಂಕ: 16.11.1988ರ ಸರ್ಕಾರದ ಆದೇಶದನ್ವಯ ಮುಖ್ಯಮಂತ್ರಿಗಳ ಸಚಿವಾಲಯ: ಸಚಿವರುಗಳ ಕಛೇರಿ, ರಾಜ್ಯ ಸಚಿವರುಗಳ ಕಛೇರಿ: ಗೃಹ ಕಛೇರಿ ಹಾಗೂ ಸಚಿವರುಗಳ ಗೃಹಗಳಿಗೆ ಸರ್ಕಾರದಿಂದ ಒದಗಿಸಲಾಗಿರುವ ಕಡತ, ಕಾಗದ ಪತ್ರಗಳು, ಬೆರಳಚ್ಚು ಯಂತ್ರಗಳು, ಲೇಖನ ಸಾಮಗ್ರಿ, ಪೀಠೋಪಕರಣ, ದೂರವಾಣಿ ಇತ್ಯಾದಿಗಳನ್ನು ಸಂಬಂಧಪಟ್ಟ ಇಲಾಖೆಗಳಿಗೆ ತಕ್ಷಣ ಹಿಂದಿರುಗಿಸತಕ್ಕದ್ದು. ಅವುಗಳ ಕಾಣೆಯಾದಲ್ಲಿ ಅಥವಾ ನಷ್ಟವಾದಲ್ಲಿ ಆ ಕಾರ್ಯಾಲಯದ ಆಪ್ತ ಕಾರ್ಯದರ್ಶಿಗಳೇ ಸ್ವತಃ ಹೊಣೆಯಾಗಿರುತ್ತಾರೆ.

**ಭಾಗ-1**

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಮತ್ತು ಪದನಾಮ<br>**ಶ್ರೀಯುತರು** | ಮಾತೃ ಇಲಾಖೆ |
|---|---|---|
| 1 | 2 | 3 |
| 1. | ಎಸ್. ಸರ್ಫರಾಜ್‌ಖಾನ್, ಕೆ.ಸಿ.ಎ.ಎಸ್. ಜಿಲ್ಲಾ ಯೋಜನಾ ಅಧಿಕಾರಿ, ಸಹಕಾರ ಲೆಕ್ಕಪರಿಶೋಧನಾ ಇಲಾಖೆ, ನಿಯೋಜನೆ ಮೇಲೆ ಕೃಷಿ ಸಚಿವರ ಆಪ್ತ ಕಾರ್ಯದರ್ಶಿ. | ಸಹಕಾರ ಲೆಕ್ಕ ಪರಿಶೋಧನಾ ಇಲಾಖೆ. |
| 2. | ಕೆ.ಎಸ್. ಶ್ರೀನಿವಾಸಲು, ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ನಿಯೋಜನೆ ಮೇಲೆ ತೋಟಗಾರಿಕಾ ಸಚಿವರ ಆಪ್ತ ಕಾರ್ಯದರ್ಶಿ. | ಸಾರ್ವಜನಿಕ ಶಿಕ್ಷಣ ಇಲಾಖೆ. |
| 3. | ಎಸ್.ಕೆ. ಚನ್ನಬಸಪ್ಪ, ಹಿರಿಯ ಸಹಾಯಕ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ನಿಯೋಜನೆ ಮೇಲೆ ವಿಜ್ಞಾನ, ತಂತ್ರಜ್ಞಾನ ಮತ್ತು ಸಣ್ಣ ಉಳಿತಾಯ ಸಚಿವರ ವಿಶೇಷಾಧಿಕಾರಿ. | ಸಾರ್ವಜನಿಕ ಶಿಕ್ಷಣ ಇಲಾಖೆ. |
| 4. | ಕೆ.ಆರ್. ಶಿವಕುಮಾರ್, ಸಹಾಯಕ ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ ನಿಯೋಜನೆ ಮೇಲೆ ಲೋಕೋಪಯೋಗಿ ಮತ್ತು ಇಂಧನ ಸಚಿವರ ವಿಶೇಷ ಕರ್ತವ್ಯಾಧಿಕಾರಿ. | ಲೋಕೋಪಯೋಗಿ ಇಲಾಖೆ. |
| 5. | ಡಾ: ಆರ್. ನರಸಿಂಹಮೂರ್ತಿ, ಕನ್ನಡ ಆಯ್ಕೆ ಶ್ರೇಣಿ ಉಪನ್ಯಾಸಕರು, ಕಾಲೇಜು ಶಿಕ್ಷಣ ಇಲಾಖೆ, ನಿಯೋಜನೆ ಮೇಲೆ ಲೋಕೋಪಯೋಗಿ ಮತ್ತು ಇಂಧನ ಸಚಿವರ ವಿಶೇಷ ಕರ್ತವ್ಯಾಧಿಕಾರಿ. | ಕಾಲೇಜು ಶಿಕ್ಷಣ ನಿರ್ದೇಶನಾಲಯ. |
| 6. | ಮಹ್ಮದ್ ಅಜಂ, ಅರ್ಥಶಾಸ್ತ್ರ ಉಪನ್ಯಾಸಕರು, ಕಾಲೇಜು ಶಿಕ್ಷಣ ನಿರ್ದೇಶನಾಲಯ, ನಿಯೋಜನೆ ಮೇಲೆ ಪಶುಸಂಗೋಪನೆ ಮತ್ತು ವಕ್ಫ್ ಸಚಿವರ ವಿಶೇಷ ಕರ್ತವ್ಯಾಧಿಕಾರಿ. | ಕಾಲೇಜು ಶಿಕ್ಷಣ ನಿರ್ದೇಶನಾಲಯ. |

| 1 | 2 | 3 |
|---|---|---|
| 7. | ಎಸ್.ಬಿ. ಮುಳ್ಳಳ್ಳಿ, ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್, ಚಿಕ್ಕೋಡಿ, ನಿಯೋಜನೆ ಮೇಲೆ ಕೃಷಿ ಮಾರುಕಟ್ಟೆ ಸಚಿವರ ಆಪ್ತ ಕಾರ್ಯದರ್ಶಿ. | ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ. |
| 8. | ಕೆ. ಮಾಧವರಾವ್, ಸಹಾಯಕ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ, ನಿಯೋಜನೆ ಮೇಲೆ ಸಹಾಯಕ ನಿಯಂತ್ರಕರು, ಮುಖ್ಯ ಮಂತ್ರಿಯವರ ಸಚಿವಾಲಯ. | ರಾಜ್ಯ ಲೆಕ್ಕಪತ್ರ ಇಲಾಖೆ. |
| 9. | ಕೆ.ಆರ್. ಕಮಲೇಶ್, ಪ್ರಾಂಶುಪಾಲರು, ಪದವಿ ಪೂರ್ವ ಶಿಕ್ಷಣ ಇಲಾಖೆ, ನಿಯೋಜನೆ ಮೇಲೆ ವಾರ್ತಾಧಿಕಾರಿ, ಮುಖ್ಯಮಂತ್ರಿಯವರ ಸಚಿವಾಲಯ. | ಪದವಿ ಪೂರ್ವ ಶಿಕ್ಷಣ ಇಲಾಖೆ. |
| 10. | ವಿ. ಶ್ರೀನಿವಾಸ್, ಅಧೀನ ಕಾರ್ಯದರ್ಶಿ, ಕೇಂದ್ರ ಸರ್ಕಾರ ಸಚಿವಾಲಯ, ನಿಯೋಜನೆ ಮೇಲೆ ವಸತಿ ಸಚಿವರ ಆಪ್ತ ಕಾರ್ಯದರ್ಶಿ. | ಕೇಂದ್ರ ಸರ್ಕಾರ ಸಚಿವಾಲಯ. |
| 11. | ಡಿ. ಜಯರಾಂ, ಮುಖ್ಯ ಯೋಜನಾಧಿಕಾರಿ, ಜಿಲ್ಲಾ ಪಂಚಾಯತ್, ಗುಲ್ಬರ್ಗಾ, ನಿಯೋಜನೆ ಮೇಲೆ ವಿಶೇಷಾಧಿಕಾರಿ, ಮುಖ್ಯ ಮಂತ್ರಿಯವರ ಸಚಿವಾಲಯ (ಗೃಹ ಕಛೇರಿ) | ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ. |
| 12. | ಗುತ್ತಿ ಜಂಬುನಾಥ್, ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ನಿಯೋಜನೆ ಮೇಲೆ ಕಾನೂನು ಮತ್ತು ಸಂಸದೀಯ ವ್ಯವಹಾರ ಸಚಿವರ ಆಪ್ತ ಕಾರ್ಯದರ್ಶಿ. | ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ. |
| 13. | ಎಸ್.ಎನ್. ಚಂದ್ರಶೇಖರ್, ಉಪ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ, ನಿಯೋಜನೆ ಮೇಲೆ ವಾರ್ತಾ ಮತ್ತು ಪ್ರಚಾರ ಸಚಿವರ ಆಪ್ತ ಕಾರ್ಯದರ್ಶಿ. | ರಾಜ್ಯ ಲೆಕ್ಕಪತ್ರ ಇಲಾಖೆ. |
| 14. | ಜಿ.ಎನ್. ಹನುಮಂತಪ್ಪ, ಜಂಟಿ ನಿರ್ದೇಶಕರು, ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಇಲಾಖೆ, ನಿಯೋಜನೆ ಮೇಲೆ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವರ ಆಪ್ತ ಕಾರ್ಯದರ್ಶಿ. | ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಇಲಾಖೆ |
| 15. | ಡಾ: ಎ.ಆರ್. ಮಂಜುನಾಥ್, ಸಾರ್ವಜನಿಕ ಸಂಪರ್ಕಾಧಿಕಾರಿಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಗುತ್ತಿಗೆ ಆಧಾರದ ಮೇಲೆ ವಿಜ್ಞಾನ, ತಂತ್ರಜ್ಞಾನ ಹಾಗೂ ಸಣ್ಣ ಉಳಿತಾಯ ಸಚಿವರ ಆಪ್ತ ಕಾರ್ಯದರ್ಶಿ. | ಕನ್ನಡ ವಿಶ್ವವಿದ್ಯಾಲಯ, ಹಂಪಿ |
| 16. | ಸಿ.ಆರ್. ಅಮರನಾಥ್, ಸಹಾಯಕ ವ್ಯವಸ್ಥಾಪಕರು, ಕರ್ನಾಟಕ ರಾಜ್ಯ ಅಪೆಕ್ಸ್ ಬ್ಯಾಂಕಿನ ಕೇಂದ್ರ ಕಛೇರಿ, ಗುತ್ತಿಗೆ ಆಧಾರದ ಮೇಲೆ ಅರಣ್ಯ ಮತ್ತು ಪರಿಸರ ಸಚಿವರ ವಿಶೇಷ ಕರ್ತವ್ಯಾಧಿಕಾರಿ. | ಕರ್ನಾಟಕ ರಾಜ್ಯ ಅಪೆಕ್ಸ್ ಬ್ಯಾಂಕಿನ ಕೇಂದ್ರ ಕಛೇರಿ. |
| 17. | ಎನ್. ಭೃಂಗೀಶ್, ಉಪ ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ ನಿಯೋಜನೆ ಮೆಲೆ ಹಿರಿಯ ವಾರ್ತಾಧಿಕಾರಿ, ಮುಖ್ಯಮಂತ್ರಿಯವರ ಸಚಿವಾಲಯ. | ವಾರ್ತಾ ಮತ್ತು ಪ್ರಚಾರ ಇಲಾಖೆ. |
| 18. | ಪಿ. ಕುಮಾರ್, ಉಪ ಅಭಿವೃದ್ಧಿ ಆಯುಕ್ತರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ನಿಯೋಜನೆ ಮೇಲೆ ಭಾರಿ, ಮಧ್ಯಮ ಮತ್ತು ಸಣ್ಣ ಕೈಗಾರಿಕೆಗಳು ಹಾಗೂ ಮೂಲಭೂತ ಸೌಕರ್ಯ ಸಚಿವರ ಆಪ್ತ ಕಾರ್ಯದರ್ಶಿ. | ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ. |
| | **ಭಾಗ-2** | |
| 1. | ಎಂ.ಕೆ. ವೆಂಕಟರಾಮ್, ಲೋಕೋಪಯೋಗಿ ಇಲಾಖೆಯ ನಿವೃತ್ತ ಇಂಜನಿಯರ್, ಗುತ್ತಿಗೆ ಆಧಾರದ ಮೇಲೆ ಲೋಕೋಪಯೋಗಿ ಮತ್ತು ಇಂಧನ ಸಚಿವರ ವಿಶೇಷ ಕರ್ತವ್ಯಾಧಿಕಾರಿ. | ಸಚಿವರ ಅಧಿಕಾರ ಮುಗಿದ ತಕ್ಷಣ ಜಾರಿಗೆ ಬರುವಂತೆ ಅಧಿಕಾರಿಯವರ ಗುತ್ತಿಗೆ ಅವಧಿಯನ್ನು ಮುಕ್ತಾಯಗೊಳಿಸಲಾಗಿದೆ. |
| 2. | ಟಿ.ಎ. ನಾಣಯ್ಯ, ನಿವೃತ್ತ ಸರ್ಕಾರದ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರ ಸಚಿವಾಲಯ ಗುತ್ತಿಗೆ ಆಧಾರದ ಮೇಲೆ ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವರ ವಿಶೇಷಾಧಿಕಾರಿ. | ಸಚಿವರ ಅಧಿಕಾರ ಮುಗಿದ ತಕ್ಷಣ ಜಾರಿಗೆ ಬರುವಂತೆ ಅಧಿಕಾರಿಯವರ ಗುತ್ತಿಗೆ ಅವಧಿಯನ್ನು ಮುಕ್ತಾಯಗೊಳಿಸಲಾಗಿದೆ. |

| 1 | 2 | 3 |
|---|---|---|
| 3. | ಕೆ.ಎಲ್. ಹನುಮಂತರಾವ್, ಸರ್ಕಾರದ ನಿವೃತ್ತ ಅಧಿಕಾರಿ, ಗುತ್ತಿಗೆ ಆಧಾರದ ಮೇಲೆ ಮುಖ್ಯ ಮಂತ್ರಿಯವರ ವಿಶೇಷ ಕರ್ತವ್ಯಾಧಿಕಾರಿ. | ಸಚಿವರ ಅಧಿಕಾರ ಮುಗಿದ ತಕ್ಷಣ ಜಾರಿಗೆ ಬರುವಂತೆ ಅಧಿಕಾರಿಯವರ ಗುತ್ತಿಗೆ ಅವಧಿಯನ್ನು ಮುಕ್ತಾಯಗೊಳಿಸಲಾಗಿದೆ. |
| 4. | ಆರ್. ಆಲ್ಬರ್ಟ್, ನಿವೃತ್ತ ವ್ಯವಸ್ಥಾಪಕ, ಮೈಸೂರ್ ಪೇಪರ್ ಮಿಲ್ಸ್ ಲಿಮಿಟೆಡ್, ಗುತ್ತಿಗೆ ಆಧಾರದ ಮೇಲೆ ಮುಖ್ಯ ಮಂತ್ರಿಯವರ ಆಪ್ತ ಕಾರ್ಯದರ್ಶಿ. | ಸಚಿವರ ಅಧಿಕಾರ ಮುಗಿದ ತಕ್ಷಣ ಜಾರಿಗೆ ಬರುವಂತೆ ಅಧಿಕಾರಿಯವರ ಗುತ್ತಿಗೆ ಅವಧಿಯನ್ನು ಮುಕ್ತಾಯಗೊಳಿಸಲಾಗಿದೆ. |
| 5. | ಕೆ.ಬಿ. ಬಸಪ್ಪ, ನಿವೃತ್ತ ನಿರ್ದೇಶಕರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಗುತ್ತಿಗೆ ಆಧಾರದ ಮೇಲೆ ಕೃಷಿ ಮಾರುಕಟ್ಟೆ ಸಚಿವರ ವಿಶೇಷ ಕರ್ತವ್ಯಾಧಿಕಾರಿ. | ಸಚಿವರ ಅಧಿಕಾರ ಮುಗಿದ ತಕ್ಷಣ ಜಾರಿಗೆ ಬರುವಂತೆ ಅಧಿಕಾರಿಯವರ ಗುತ್ತಿಗೆ ಅವಧಿಯನ್ನು ಮುಕ್ತಾಯಗೊಳಿಸಲಾಗಿದೆ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್.507

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಆಸುಇ (ಸೇವೆಗಳು-2).

## ನೀರಾವರಿ ಇಲಾಖೆ (ಸಣ್ಣ ನೀರಾವರಿ)

## ಕಾರ್ಯನಿರ್ವಾಹಕ ಇಂಜಿನಿಯರ ಕಛೇರಿ, ಸಣ್ಣ ನೀರಾವರಿ ಗುಣನಿಯಂತ್ರಣ ವಿಭಾಗ, ಧಾರವಾಡ

## ಸಂಖ್ಯೆ:ಸನೀಗುನಿವಿ: ಧಾ: ಮಾಹಿತಿ: ಸಇಂ-1: 0506/ 918, ದಿನಾಂಕ:1ನೇ ಫೆಬ್ರವರಿ, 2006

**1) ರಚನೆ, ಕಾರ್ಯಗಳು ಹಾಗೂ ಕರ್ತವ್ಯಗಳು:**

ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಅಡಿಯಲ್ಲಿ ನಿರ್ಮಾಣಗೊಳ್ಳುತ್ತಿರುವ ಸಣ್ಣ ನೀರಾವರಿ ಕೆರೆ ಕಾಮಗಾರಿ, ಬ್ಯಾರೇಜ್ ಹಾಗೂ ಏತ ನೀರಾವರಿಗಳ ನಿರ್ಮಾಣ ಹಂತಗಳಲ್ಲಿ ಅವುಗಳಿಗೆ ಉಪಯೋಗಿಸುವ ಕಟ್ಟಡ ಸಾಮಗ್ರಿಗಳ ಗುಣ ನಿಯಂತ್ರಣ ಕೆಲಸ ನಿರ್ವಹಿಸುವುದು. ಈ ನಿರ್ವಹಣೆಗಾಗಿ 4 ಉಪವಿಭಾಗಗಳನ್ನು ಹೊಂದಿದ್ದು ಸುಸಜ್ಜಿತವಾದ ಪ್ರಯೋಗಾಲಯಗಳನ್ನು ಕೂಡ ಸ್ಥಾಪಿಸಲಾಗಿದೆ. ಪ್ರಸ್ತುತ ಈ ವಿಭಾಗದ ಮುಖ್ಯಸ್ಥರಾಗಿ ಶ್ರೀ ಟಿ.ಜಿ. ಪರೇಖ, ಕಾರ್ಯನಿರ್ವಾಹಕ ಇಂಜಿನಿಯರರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಇವರ ಸಂಗಡ 4 ಸಹಾಯಕ ಇಂಜಿನಿಯರರು, ಒಬ್ಬ ಪ್ರಥಮ ದರ್ಜೆ ಲೆಕ್ಕ ಸಹಾಯಕ ಹಾಗೂ ಒಬ್ಬರು ಪ್ರಥಮದರ್ಜೆ ಸಹಾಯಕ, ಇಬ್ಬರು ದ್ವಿತೀಯದರ್ಜೆ ಸಹಾಯಕರು, ಇಬ್ಬರು ಬೆರಳಚ್ಚುಗಾರರು, 3 ಸಿಪಾಯಿಗಳು, ಓರ್ವ ಅಟೆಂಡರ್, ಹಾಗೂ ಓರ್ವ ಕಾವಲುಗಾರರನ್ನು ಹೊಂದಿದೆ.

**2) ಕಛೇರಿಯ ಕಾರ್ಯಗಳು ಈ ಕೆಳಗಿನಂತಿವೆ:**

**ಈ ವಿಭಾಗದ ಅಡಿಯಲ್ಲಿನ ಉಪವಿಭಾಗಗಳು ಈ ಕೆಳಗಿನಂತಿವೆ.**

1) ಸಹಾಯಕ ಕಾರ್ಯನಿರ್ವಾಹಕ ಇಂಜಿನಿಯರು, ಸಣ್ಣ ನೀರಾವರಿ ಗುಣನಿಯಂತ್ರಣ ಉಪವಿಭಾಗ, ಧಾರವಾಡ.

2) ಸಹಾಯಕ ಕಾರ್ಯನಿರ್ವಾಹಕ ಇಂಜಿನಿಯರು, ಸಣ್ಣ ನೀರಾವರಿ ಗುಣನಿಯಂತ್ರಣ ಉಪವಿಭಾಗ, ಬೆಳಗಾವಿ.

3) ಸಹಾಯಕ ಕಾರ್ಯನಿರ್ವಾಹಕ ಇಂಜಿನಿಯರು, ಸಣ್ಣ ನೀರಾವರಿ ಗುಣನಿಯಂತ್ರಣ ಉಪವಿಭಾಗ, ಗುಲ್ಬರ್ಗಾ.

4) ಸಹಾಯಕ ಕಾರ್ಯನಿರ್ವಾಹಕ ಇಂಜಿನಿಯರು, ಸಣ್ಣ ನೀರಾವರಿ ಗುಣನಿಯಂತ್ರಣ ಉಪವಿಭಾಗ, ಬಳ್ಳಾರಿ.

**3) ಕರ್ತವ್ಯ ನಿರ್ವಹಣೆ ಮಾರ್ಗಸೂಚಿ:**

ಈ ಗುಣ ನಿಯಂತ್ರಣ ನಿರ್ವಹಿಸಲು ಕರ್ನಾಟಕ ಸರ್ಕಾರ ನೀರಾವರಿ ಇಲಾಖೆ ನೀಡಿರುವ ಮಾರ್ಗದರ್ಶಿಯಲ್ಲಿ ಕೆರೆಗಳ ವಿನ್ಯಾಸಕ್ಕಾಗಿ ಮಣ್ಣು ಮಾದರಿಗಳ ದಾಖಲೆ ಪರೀಕ್ಷೆಗಳನ್ನು ನಡೆಸುವುದು. ಕಾಮಗಾರಿ ಪ್ರಗತಿಯಲ್ಲಿದ್ದಾಗ ಅದಕ್ಕೆ ಉಪಯೋಗಿಸುವ ಮಣ್ಣು ಸಮರ್ಪಕವೋ ಹೇಗೆ ಎಂಬುದನ್ನು ಪರೀಕ್ಷಿಸುವುದು, ಅಲ್ಲದೇ ಕಾಂಕ್ರೀಟ ಹಾಗೂ ಗಾರೆ ಕೆಲಸಗಳಲ್ಲಿ ಉಪಯೋಗಿಸುವ ಖಡಿ, ಉಸುಕು ಮತ್ತು ಸಿಮೆಂಟ್‌ಗಳ ಪರೀಕ್ಷೆ ಕೈಗೊಳ್ಳುವುದು. ಈ ಎಲ್ಲಾ ಪರೀಕ್ಷೆಗಳ ಫಲಿತಾಂಶಗಳನ್ನು ಕಾಮಗಾರಿ ವಿಭಾಗಕ್ಕೂ ಹಾಗೂ ಮೇಲಾಧಿಕಾರಿಗಳಿಗೆ ಕಳಿಸುವುದು ಇತ್ಯಾದಿ.

4) ಈ ಕಛೇರಿಗೆ ಸಂಬಂಧಪಟ್ಟ ಮಾಹಿತಿ ಪಡೆಯಲು ಸಂಪರ್ಕಿಸಬೇಕಾದ ಅಧಿಕಾರಿಯ ವಿವರಗಳನ್ನು ಈ ಕಛೇರಿಯ ಅಧಿಸೂಚನಾ ಪತ್ರ ಸಂಖ್ಯೆ: 684, ದಿನಾಂಕ: 16.11.2005 ಮೂಲಕ ಪ್ರಕಟಿಸಲಾಗಿದೆ.

5) ಈ ವಿಭಾಗದ ಅಡಿಯಲ್ಲಿನ ಅಧಿಕಾರಿಗಳ ಹಾಗೂ ಸಿಬ್ಬಂದಿಯ ವಿವರಗಳುಳ್ಳ ಫಲಕ ಪ್ರಕಟಿಸಲಾಗಿದೆ.

6) ಅಧಿಕಾರಿ ಹಾಗೂ ಸಿಬ್ಬಂದಿಯ ವೇತನ ವಿವರ ಪ್ರಕಟಿಸಿದೆ.

7) ಕರ್ನಾಟಕ ಮಾಹಿತಿ ಹಕ್ಕು ಅಧಿನಿಯಮ 2005ರ ಅಡಿಯಲ್ಲಿ ಈ ವಿಭಾಗ ಕಛೇರಿಗೆ ಸಂಬಂಧಿಸಿದ ಅಧಿಕಾರಿಗಳ ವಿವರ.

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಹಾಗೂ ಪದನಾಮ | ಕರ್ತವ್ಯ | ದೂರವಾಣಿ ಸಂಖ್ಯೆ |
|---|---|---|---|
| 1. | ಶ್ರೀ ಟಿ.ಜಿ. ಪರೇಖ, ಕಾರ್ಯನಿರ್ವಾಹಕ ಇಂಜಿನಿಯರು. | ಸಕ್ಷಮ ಪ್ರಾಧಿಕಾರ. | 0836 2447981. |
| 2. | ಶ್ರೀ ಮಹಮ್ಮದ್ ರಫೀಕ್, ಸಹಾಯಕ ಇಂಜಿನಿಯರು. | ಸಾರ್ವಜನಿಕ ಸಹಾಯಕ ಮಾಹಿತಿ ಅಧಿಕಾರಿ. | - ಸದರ- |

ಈ ಅಧಿನಿಯಮದ ಪ್ರಕಾರ ಮಾಹಿತಿ ಪಡೆಯಲು ಇಚ್ಛಿಸುವವರು ಮೇಲ್ಕಂಡ ಪ್ರಾಧಿಕಾರಿಗಳಲ್ಲಿ ನಿಯಮಾನುಸಾರ ಮನವಿ ಸಲ್ಲಿಸಿ ಮಾಹಿತಿ ಪಡೆಯಬಹುದಾಗಿದೆ.

ಕಾರ್ಯನಿರ್ವಾಹಕ ಇಂಜಿನಿಯರರು,

ಪಿ.ಆರ್.508

ಸಣ್ಣ ನೀರಾವರಿ ಗುಣ ನಿಯಂತ್ರಣ ವಿಭಾಗ, ಧಾರವಾಡ.

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾವೇರಿ ಜಿಲ್ಲೆ, ಹಾವೇರಿ

### ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎಫ್:6/ 06/ 631, ದಿನಾಂಕ:30ನೇ ಜನವರಿ, 2006

**ಅರ್ಜಿದಾರರು:**

1. ಶ್ರೀಮತಿ ಮಮತಾ @ ಸಂಯೋಗಿತಾ W/o ಛಬ್ಬು ಅಂಕೂಶ, ಹಾಲಿವಸ್ತಿ: ವಿದ್ಯಾನಗರ, ಹಾವೇರಿ.
2. ಕು: ಸೂರಜ
3. ಕು: ಸುರೇಶ.

**ಪ್ರತಿವಾದಿಗಳು:**

1) ಎ.ಬಿ.ಯು.ಆರ್.ಎಸ್.ಡಿ., ಟಾಟಾ ಮೋಟರ್ಸ್, ಲಿಮಿಟೆಡ್, ಗಂಗ ಕ್ರಾಸ್, ಲಾರಿ ಮಾಲೀಕರು, ಧಾರವಾಡ.

2) ಡಿವಿಜನಲ್ ಮ್ಯಾನೇಜರ್, ನ್ಯೂ ಇಂಡಿಯಾ ಅಶೂರನ್ಸ್ ಕಂ.ಲಿ. ದಾವಣಗೆರೆ.

**ಪ್ರಕಟಣೆ**

ಶ್ರೀಮತಿ ಮಮತಾ @ ಸಂಯೋಗಿತಾ W/o ಛಬ್ಬು ಅಂಕೂಶ, ಇವರುಗಳಾದ ಮೃತ ಛಬ್ಬು @ ಚಬ್ಬು S/o ನಾಗನಾಥ ಅಂಕೂಶ ಇವರ ಹೆಂಡತಿ ಮತ್ತು ಮಕ್ಕಳು ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಛಬ್ಬು ಎನ್. ಅಂಕೂಶ ಇವರು ಒಂದನೇ ಪ್ರತಿವಾದಿಗಳಾದ ಎ.ಬಿ.ಯು.ಆರ್.ಎಸ್.ಡಿ. ಟಾಟಾ ಮೋಟರ್ಸ್, ಇವರ ಟಾಟಾ ಮಿನಿಲಾರಿ ಯಲ್ಲಿ ಚಾಲಕನಾಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಯನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ಹಾಗೂ ಕರ್ಮಿಕ ನಷ್ಟ ಪರಿಹಾರ ಆಯುಕ್ತರು,
ಹಾವೇರಿ ಜಿಲ್ಲೆ ಹಾವೇರಿ.

ಪಿ.ಆರ್.509

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ ಅಡಿ ಆಯುಕ್ತರು, ಗದಗ ಜಿಲ್ಲೆ, ಗದಗ್ ಇವರ ನ್ಯಾಯಾಲಯದಲ್ಲಿ

### ಸಂಖ್ಯೆ:ಕಾಅಿಗ: ಕಾನಪ: ಎಫ್ 06: 06: 1179, ದಿನಾಂಕ:6ನೇ ಫೆಬ್ರವರಿ, 2006

**ಅರ್ಜಿದಾರರು:**

1. ಶ್ರೀಮತಿ ರಿಹಣ ಕೋಂ: ರಿಯಾಜ್ ಅಹಮದ್ ರೋಕಲಕಟ್ಟಿ @ ರೊಕದಕಟ್ಟಿ, ಸಾ: ಅಣ್ಣಿಗೇರಿ, ನವಲಗುಂದ ತಾಲ್ಲೂಕು, ಧಾರವಾಡ ಜಿಲ್ಲೆ, ಹಾಲಿ ವಸ್ತಿ: ಎಸ್.ಎಂ. ಕೃಷ್ಣ ನಗರ, ಹೊಂಬಳ ರಸ್ತೆ, ಗದಗ.

**ಪ್ರತಿವಾದಿಗಳು:**

1) ಮೇನೇಜರ್, ಪವನ್ ಕನ್ಸ್‌ಟ್ರಕ್ಷನ್ ಕಂಪನಿ, ವರ್ಕ್ಸ್: ಅರ್ಕೆ ಫಾರ್ಮ ಕೆಮಿಕಲ್ ಲ್ಯಾಬ್ ಲಿಮಿಟೆಡ್, ಜಿ-4, ಖರವೈಎಂ.ಐ.ಡಿ.ಇ. ಬದ್ಲಾಪುರ, ಥಾಣೆ ಜಿಲ್ಲೆ, (ಮಹಾರಾಷ್ಟ್ರ).

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ರಿಹಾನ ಕೋಂ: ರಿಯಾಜ್ ಅಹಮದ್ ರೋಕಲಕಟ್ಟಿ @ ರೊಕದಕಟ್ಟಿ, ಇವರು, ತಾವು ಮೃತ ರಿಯಾಜ್ ಅಹಮದ್ ಇಬ್ರಾಹಿಂ ರೊಕಲಕಟ್ಟಿ @ ರೊಕದಕಟ್ಟಿ, ಇವರ ಹೆಂಡತಿ ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ರಿಯಾಜ್ ಅಹಮದ್ ಇಬ್ರಾಹಿಂ ರೊಕಲಕಟ್ಟಿ @ ರೊಕದಕಟ್ಟಿ ಇವರು ಒಂದನೇ ಪ್ರತಿವಾದಿಗಳಾದ ಪವನ್ ಕನ್ಸಟ್ರಕ್ಷನ್ ಕಂಪನಿ, ಬದ್ಲಾಪುರ ಇವರಲ್ಲಿ ಗಾಂಡಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಯನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ಹಾಗೂ ಕರ್ಮಿಕ ನಷ್ಟ ಪರಿಹಾರ ಕಾನೂನು ಅಡಿ
ಆಯುಕ್ತರು, ಗದಗ್ ಜಿಲ್ಲೆ ಗದಗ್.

ಪಿ.ಆರ್.510

## ಅರಣ್ಯ ಇಲಾಖೆ

### ಅಧಿಸೂಚನೆ ಸಂಖ್ಯೆ: ಬಿ1.ನೇನೇ.ವಅ.1: 2003-04, ದಿನಾಂಕ:20ನೇ ಫೆಬ್ರವರಿ, 2004

### ವಲಯ ಅರಣ್ಯ ಅಧಿಕಾರಿ ಹುದ್ದೆಯ ತರಬೇತಿಗೆ ಆಯ್ಕೆಯಾದ ಅಭ್ಯರ್ಥಿಗಳ ಪಟ್ಟಿ

ಅರಣ್ಯ ಇಲಾಖೆಯಲ್ಲಿ ವಲಯ ಅರಣ್ಯ ಅಧಿಕಾರಿ ಹುದ್ದೆಯ ತರಬೇತಿಗೆ ಈ ಕಛೇರಿ ಸಂಖ್ಯೆ: ಬಿ1. ನೇನೇ.ವಅ.1: 2003-04, ದಿನಾಂಕ: 22.02.2004ರಂತೆ ಅಧಿಸೂಚನೆ ಹೊರಡಿಸಿ ಒಟ್ಟು 20 ಅಭ್ಯರ್ಥಿಗಳನ್ನು 2003-2005 ತರಬೇತಿಗೆ ಆಯ್ಕೆ ಮಾಡುವ ಸಲುವಾಗಿ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿತ್ತು.

ವೃಂದ ಮತ್ತು ನೇಮಕಾತಿ ನಿಯಮಗಳನುಸಾರ ಅಭ್ಯರ್ಥಿಗಳು ಮುಖ್ಯ ಪರೀಕ್ಷೆಯಲ್ಲಿ ಗಳಿಸಿದ ಅಂಕಗಳನ್ನು ಕ್ರೂಢೀಕರಿಸಿ ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್.62. ಎಸ್‌ಆರ್‌ಇ.2002 ದಿನಾಂಕ: 17.10.2002, ಸಂಖ್ಯೆ: ಸಿಆಸುಇ.6. ಸೇನನಿ.2002, ದಿನಾಂಕ: 13.02.2001 ಮತ್ತು ಸಂಖ್ಯೆ: ಸಿಆಸುಇ.97.ಸೇನನಿ. 2002, ದಿನಾಂಕ: 22.11.2002ರಲ್ಲಿ ಜಾರಿಯಲ್ಲಿರುವ ಮೀಸಲಾತಿ ನಿಯಮಗಳ ಅನುಸಾರ ವಲಯ ಅರಣ್ಯ ಅಧಿಕಾರಿ ಹುದ್ದೆಯ ತರಬೇತಿಗೆ ಅರ್ಹರಾದ ಅಭ್ಯರ್ಥಿಗಳ ಪಟ್ಟಿಯನ್ನು ಈ ಕೆಳಗಿನಂತೆ ಪ್ರಕಟಿಸಿದೆ.

ನವೆಂಬರ್ 2004ರಲ್ಲಿ ನಡೆದ ಪರೀಕ್ಷೆಗಳ ಆಧಾರದ ಮೇಲೆ ವಲಯ ಅರಣ್ಯಾಧಿಕಾರಿಗಳ ತರಬೇತಿಗಾಗಿ ಆಯ್ಕೆ ಮಾಡಲಾದ ಅಭ್ಯರ್ಥಿಗಳ ಪಟ್ಟಿ

ಬಿ.ಎಸ್‌ಸಿ. (ಅರಣ್ಯ)

| ಕ್ರಮ ಸಂಖ್ಯೆ | ನೋಂದಣಿ ಸಂಖ್ಯೆ | ಹೆಸರು | ಜನ್ಮ ದಿನಾಂಕ | ಲಿಂಗ | ಅರ್ಜಿಯಲ್ಲಿ ನಮೂದಿಸಿರುವ ವರ್ಗ | ಆಯ್ಕೆಯಾದ ವರ್ಗ | ಮುಖ್ಯ ಪರೀಕ್ಷೆಯಲ್ಲಿ ಗಳಿಸಿದ ಒಟ್ಟು ಅಂಕಗಳು |
|---|---|---|---|---|---|---|---|
| 1. | 5356 | Sudarshan G.K. | 02.09.1978 | Male | GM | GM | 306 |
| 2. | 5946 | Madhu V. Raj | 02.04.1979 | Male | SC | GM (in lieu of GM Female) | 288 |
| 3. | 5357 | Boraiah K.T. | 22.07.1975 | Male | III(a)/ R | GM-Rural | 287 |
| 4. | 5176 | Suresh Teli | 01.06.1979 | Male | III(b)/ R | GM-Rural | 279 |
| 5. | 5780 | Raju Agasimani | 01.06.1978 | Male | GM | GM Ex-Service | 273 |
| 6. | 5526 | Hanumantha M. | 01.06.1975 | Male | I/R | I | 247 |
| 7. | 5117 | Shrinivas N. Yaradoni | 22.07.1974 | Male | II(a) | II(a) in lieu of Female | 230 |
| 8. | 5521 | Sridhara M. | 10.05.1978 | Male | II(a) Rural | II(a) Rural | 202 |
| 9. | 5661 | Lohith B.R. | 10.03.1981 | Male | SC | SC | 198 |
| 10. | 5485 | Santhosh Naik R. | 04.06.1978 | Male | SC/R | SC/R | 184 |
| ಬಿ.ಎಸ್‌ಸಿ (ಇತರೆ) | | | | | | | |
| 1. | 5565 | Geetha M.C. | 01.06.1976 | Female | SC | GM | 305 |
| 2. | 5002 | Syed Ahmed Shah Hussaini | 08.06.1978 | Male | I | I | 293 |
| 3. | 5603 | Sidramappa M.C. | 01.07.1979 | Male | III(b)/ R | GM-R | 270 |
| 4. | 5100 | Praveen | 14.07.1976 | Male | SC/R | GM-R | 262 |
| 5. | 5784 | Lakshmi devamma T.N. | 01.07.1977 | Female | GM/R | GM/ Female | 240 |
| 6. | 5460 | Paremesha K. | 01.05.1978 | Male | SC/R | SC | 235 |
| 7. | 5050 | Malakari Baladandi | 15.071981 | Male | II(a)/ Rural | II(a)/ Rural | 228 |
| 8. | 5511 | Manjunath G. Navi | 23.06.1976 | Male | SC/ R | SC/ R | 214 |
| 9. | 5184 | Reena L. | 06.03.1983 | Female | II(a)/ R | II(a)/ Female | 203 |
| 10. | 6080 | Manohar Chittawadagi | 01.09.1961 | Male | III(b)/ Ex-Servicemen | GM-Ex-Servicemen | 96 |

ರಾಮಮೋಹನ ರೇ

ಪಿ.ಆರ್.513

ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ಹಾಗೂ ಆಯ್ಕೆ ಪ್ರಾಧಿಕಾರಿ.

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು

**ವಿಷಯ:** ಸಮಾಪನೆಗೊಂಡ ನೆಲಮಂಗಲ ಟೌನ್ ಬಳಕೆದಾರರ ಸಹಕಾರ ಸಂಘ ನಿ., ನೆಲಮಂಗಲ ಈ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ:**
1. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರರವರ ಪತ್ರ ಸಂಖ್ಯೆ: ಸಸಸನಿ-47/ ಸಮಾಪನೆ/ 57/ 2004-2005, ದಿನಾಂಕ: 25.02.2005.
2. ಈ ಕಛೇರಿಯ ಸಮಾಪನಾ ಆದೇಶ ಸಂಖ್ಯೆ: ಡಿಆರ್‌ಬಿ/ ಆರ್/ ಸಮಾಪನೆ/ 35/ 1998-99, ದಿನಾಂಕ: 24.07.2000.
3. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರರವರ ಪತ್ರ ಸಂಖ್ಯೆ: ಸಸಸನಿ-47/ ಸಮಾಪನೆ/ 54/ 2004-2005, ದಿನಾಂಕ: 16.02.2005.
4. ಸಹಕಾರ ಅಭಿವೃದ್ಧಿ ಅಧಿಕಾರಿ, ನೆಲಮಂಗಲ ಇವರ ಪತ್ರ ದಿನಾಂಕ: 10.01.2006.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರ ರವರು ಉಲ್ಲೇಖ (1)ರ ಪತ್ರದಲ್ಲಿ ನೋಂದಣಿ ಸಂಖ್ಯೆ:ಎಆರ್-47/ ಆರ್‌ಜಿಎನ್/ 1770/ 1991-92, ದಿನಾಂಕ: 01.10.1991 ರಂದು ನೋಂದಣಿಯಾದ ಸಮಾಪನೆಗೊಂಡ ನೆಲಮಂಗಲ ಟೌನ್ ಬಳಕೆದಾರರ ಸಹಕಾರ ಸಂಘ ನಿ., ನೆಲಮಂಗಲ ಈ ಸಂಘವು ಬೈಲಾ ಉದ್ದೇಶಗಳ ರೀತ್ಯಾ ತನ್ನ ಕಾರ್ಯಚಟುವಟಿಕೆಗಳನ್ನು ನಡೆಸದೆ ಸಮಾಪನೆಗೊಂಡಿದ್ದು, ಇದರಿಂದ ಸಂಘದ ಸದಸ್ಯರಿಗೆ ಯಾವುದೇ ಅನುಕೂಲವಾಗದೇ ಇರುವ ಪ್ರಯುಕ್ತ ಈ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಈ ಸಂಘವು ನೋಂದಾಣಿಯಾದಾಗಿನಿಂದ ತನ್ನ ಕಾರ್ಯಚಟುವಟಿಕೆಗಳನ್ನು ನಡೆಸದೇ ಉಲ್ಲೇಖ (2)ರ ಆದೇಶದಲ್ಲಿ ಸಮಾಪನೆಗೊಂಡಿರುತ್ತದೆ. ಸಮಾಪನಾಧಿಕಾರಿಗಳು ಸಂಘದ ಪ್ರಭಾರ ಪಡೆಯಲು ಸಾಧ್ಯವಾಗದೇ ಕೇವಲ ಷೇರು ಲೆಡ್ಜರ್‌ಗಳನ್ನು ಪಡೆದುಕೊಂಡಿರುತ್ತಾರೆ. 1996-97ರವರೆಗೆ ಆಡಿಟ್ ಆಗಿದ್ದು, ಸರ್ಕಾರಕ್ಕೆ ಯಾವುದೇ ಬಾಕಿ ಇರುವುದಿಲ್ಲ. ಸಂಘವು ಒಟ್ಟು ರೂ.5058-50 ಗಳ ನಷ್ಟ ಹೊಂದಿದ್ದು, ಸಂಘಕ್ಕೆ ಶ್ರೀ ಅನ್ನಪೂರ್ಣೇಶ್ವರಿ ಗೃಹ ನಿರ್ಮಾಣ ಸಹಕಾರ ಸಂಘದಲ್ಲಿ ತೊಡಗಿಸಿರುವ ಠೇವಣಿ ಹಣ ರೂ.12.000-00 ಗಳ ವಸೂಲಾತಿಗಾಗಿ ಸಂಘದ ಅಧ್ಯಕ್ಷರೊಂದಿಗೆ ಸಮಾಪನಾಧಿಕಾರಿಗಳು ಪತ್ರ ವ್ಯವಹಾರ ಮಾಡಿದರೂ ಈ ಬಗ್ಗೆ ಸಂಘದವರು ಸ್ಪಂಧಿಸುತ್ತಿಲ್ಲವೆಂದು ಸಮಾಪನಾಧಿಕಾರಿಗಳು ತಿಳಿಸಿರುವುದಾಗಿ ಉಲ್ಲೇಖ (3)ರ ಪತ್ರದಲ್ಲಿ ಸಹಾಯಕ ನಿಬಂಧಕರು ದೊಡ್ಡಬಳ್ಳಾಪುರ ರವರು ತಿಳಿಸಿರುತ್ತಾರೆ.

ಈ ಸಂಘವನ್ನು ಪುನಃಶ್ಚೇತನಗೊಳಿಸಲು ಸಂಘದ ಸದಸ್ಯರು ಯಾರು ಮುಂದೆ ಬರದ ಕಾರಣ ಹಾಗೂ ಈ ಸಂಘವು ಹೀಗೆಯೇ ಮುಂದುವರೆಯುವುದರಿಂದ ಸಂಘದ ಸದಸ್ಯರಿಗೆ, ಸಾರ್ವಜನಿಕರಿಗೆ ಯಾವುದೇ ಪ್ರಯೋಜನವಿಲ್ಲವೆಂದು ಪರಿಗಣಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಆದೇಶ ಸಂಖ್ಯೆ: ಡಿಆರ್‌ಬಿ/ ಆರ್/ ಸಮಾಪನೆ/ 49/ 2005-2006, ದಿನಾಂಕ: 13ನೇ ಫೆಬ್ರವರಿ, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 75ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ-69/ ಸಿಎಲ್‌ಎಂ/ 2001, ದಿನಾಂಕ: 21.11.2001 ರಂತೆ ನನಗೆ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಎಂ.ವೆಂಕಟೇಶಗೌಡ, ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಆದ ನಾನು ನೆಲಮಂಗಲ ಟೌನ್ ಬಳಕೆದಾರರ ಸಹಕಾರ ಸಂಘ ನಿ. ನೆಲಮಂಗಲ ಈ ಸಂಘದ ನೋಂದಣಿ ಸಂಖ್ಯೆ: ಎಆರ್-47/ ಆರ್‌ಜಿಎನ್/ 1770/ 1991-92, ದಿನಾಂಕ: 01.10.1991ನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 13.02.2006ರಂದು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು,

ಪಿ.ಆರ್.514 ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಹಾವೇರಿ ಜಿಲ್ಲೆ, ಹಾವೇರಿ**

**ಸಂಖ್ಯೆ:ಡಬ್ಲ್ಯೂಸಿಎ:ಎಫ್9/ 06, ದಿನಾಂಕ:30ನೇ ಜನವರಿ, 2006**

| **ಅರ್ಜಿದಾರರು:** | **ಪ್ರತಿವಾದಿಗಳು:** |
|---|---|
| 1. ಸಂಗಪ್ಪ S/o ಮಲತಪ್ಪ ಅಗಸಿಬಾಗಿಲ R/o ಅಗಡಿ | 1. ಕೊಟ್ರಪ್ಪ S/o ಚನ್ನಬಸಪ್ಪ, ಬಸೆಗಣ್ಣೆ, R/o ಅಗಡಿ ತಾಲ್ಲೂಕು: ಹಾವೇರಿ ಜಿಲ್ಲೆ. |
| 2. ಶ್ರೀಮತಿ ಸಾವಕ್ಕ W/o ಸಂಗಪ್ಪ, ಅಗಸಿಬಾಗಿಲ. | 2. ಡಿವಿಜನಲ್ ಮ್ಯಾನೇಜರ್ ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿಮಿಟೆಡ್, ಹುಬ್ಬಳ್ಳಿ. |

**ಪ್ರಕಟಣೆ**

ಶ್ರೀ ಸಂಗಪ್ಪ ಮಲ್ಲಪ್ಪ ಅಗಸಿಬಾಗಿಲ (2) ಶ್ರೀಮತಿ ಸಾವಕ್ಕ W/o ಸಂಗಪ್ಪ, ಅಗಸಿಬಾಗಿಲ, ಇವರುಗಳಾದ ಮೃತ ಮಲತಪ್ಪ S/o ಸಂಗಪ್ಪ ಅಗಸಿಬಾಗಿಲ ಇವರ ತಂದೆ ಮತ್ತು ತಾಯಿ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಮಲತಪ್ಪ ಇವರು ಒಂದನೇ ಪ್ರತಿವಾದಿಗಳಾದ ಶ್ರೀ ಕೊಟ್ರಪ್ಪ S/o ಚನ್ನಬಸಪ್ಪ ಬಸಗಣ್ಣೆ ಇವರ ಟ್ರ್ಯಾಕ್ಟರ್ ಟ್ರೇಲರ್ ರಲ್ಲಿ ಕೂಲಿಕಾರ್ಮಿಕ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಯನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ಹಾಗೂ ಕರ್ಮಿಕ ನಷ್ಟ ಪರಿಹಾರ ಆಯುಕ್ತರು,

ಪಿ.ಆರ್.515 ಹಾವೇರಿ ಜಿಲ್ಲೆ ಹಾವೇರಿ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಹಾವೇರಿ ಜಿಲ್ಲೆ, ಹಾವೇರಿ**

**ಸಂಖ್ಯೆ:ಡಬ್ಲ್ಯೂಸಿಎ:ಎಫ್129/ 05/ 630, ದಿನಾಂಕ:30ನೇ ಜನವರಿ, 2006**

| **ಅರ್ಜಿದಾರರು:** | **ಪ್ರತಿವಾದಿಗಳು:** |
|---|---|
| (1) ಶ್ರೀಮತಿ ನೂರಜಹಾನ್ W/o ಅಯೂಬ್‌ಖಾನ್ ಮತ್ತು ಕು: ತಬಸುಮ, (2) ಕು: ತಸ್ಮಿಯಾಬಾನು, | 1. ಶ್ರೀ ಹೆಚ್.ಎಂ. ಚನ್ನಬಸಯ್ಯ S/o ಹೆಚ್.ಎಂ. ವೀರಯ್ಯ ಹಿರೇಮಠ, ಲಾರಿ ಮಾಲೀಕರು, ಹೊನ್ನಳ್ಳಿ, ಜಿಲ್ಲೆ: ದಾವಣಗೆರೆ. |
| (3) ಕು: ರೋಖಯ್ಯಾ, (4) ಕು: ಅಪ್ಸಾನಾ, (5) ಕು: ಸಬರಿನ್, (6) ಶ್ರೀಮತಿ ಮೆಹರುನ್‌ಬಿ W/o ರಶಾದ್‌ಸಾಬ. | 2. ಡಿವಿಜನಲ್ ಮ್ಯಾನೇಜರ್ ಓರಿಯಂಟಲ್ ಇನ್ಸೂರೆನ್ಸ್ ಕಂ.ಲಿಮಿಟೆಡ್, ಹುಬ್ಬಳ್ಳಿ. |

**ಪ್ರಕಟಣೆ**

ಶ್ರೀಮತಿ ನೂರಜಹಾನ್ W/o ಅಯೂಬ್‌ಖಾನ್ ಮತ್ತು ಇತರರು, ಇವರುಗಳಾದ ಮೃತ ಅಯೂಬ್‌ಖಾನ್ S/o ರಶೀದ್‌ಸಾಬ್ ಇವರ ಹೆಂಡತಿ ಮತ್ತು ಮಕ್ಕಳು ಹಾಗೂ ತಾಯಿ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಅಯೂಬ್‌ಖಾನ್ ಇವರು ಒಂದನೇ ಪ್ರತಿವಾದಿಗಳಾದ ಶ್ರೀ ಹೆಚ್.ಎಂ.ಚನ್ನಬಸಯ್ಯ ವೀರಯ್ಯ ಹಿರೇಮಠ ಇವರ ಲಾರಿಯಲ್ಲಿ ಚಾಲಕನಾಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಯನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ಹಾಗೂ ಕರ್ಮಿಕ ನಷ್ಟ ಪರಿಹಾರ ಆಯುಕ್ತರು,
ಹಾವೇರಿ ಜಿಲ್ಲೆ ಹಾವೇರಿ.

ಪಿ.ಆರ್.516

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪವಿಭಾಗ-2, ಬಳ್ಳಾರಿ**

**ಸಂಖ್ಯೆ:12: 2006, ದಿನಾಂಕ:16ನೇ ಫೆಬ್ರವರಿ, 2006**

**ಅರ್ಜಿದಾರರು:**

1. ಶ್ರೀಮತಿ ನಂದಮ್ಮ ಕೋಂ: ಯಮುನಪ್ಪ.
2. ದೇವ ಬಿನ್: ಯಮುನಪ್ಪ.
3. ಶೃತಿ ಬಿನ್ : ಯಮುನಪ್ಪ,

ವಾಸ: ಕಲ್ಮಠಬೀದಿ ಬಳ್ಳಾರಿ.

**ಪ್ರತಿವಾದಿಗಳು:**

1. ಶ್ರೀ ಸೈಯದ್ ಅಬ್ದುಲ್ ವಾಹೀದ್ ಬಿನ್: ಔರಂಗಾಬಾದ್, ಮಹಾರಾಷ್ಟ್ರ.
2. ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂಪನಿ ಲಿಮಿಟೆಡ್ ಬಳ್ಳಾರಿ.

**ಪ್ರಕಟಣೆ**

ಮೃತ ಮಹಾದೇವಪ್ಪ ರವರು 1ನೇ ಪ್ರತಿವಾದಿಗಳ- ಮಾಲೀಕರ ಬಳಿ ಅವರ ಲಾರಿಯಲ್ಲಿ ಕ್ಲೀನರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗಲೇ ದಿನಾಂಕ: 22.06.2005ರಂದು ಅಪಘಾತವಾಗಿ ಗಾಯಗೊಂಡು ದಿನಾಂಕ: 22.06.2005ರಂದು ಮೃತಪಟ್ಟಿರುತ್ತಾರೆಂದೂ ಹಾಗೂ ತಾವು ಮಾತ್ರ ಮೃತನ ಅವಲಂಬಿತರೆಂದು ಹೇಳಿಕೊಂಡು ಈ ನ್ಯಾಯಾಲಯದ ಮುಂದೆ ಮೇಲಿನ ಅರ್ಜಿದಾರರು ಪರಿಹಾರ ಕೋರಿ ಅರ್ಜಿ ಸಲ್ಲಿಸಿರುತ್ತಾರೆ.

2. ಕಾರಣ, ಈ ಮೂಲಕ ಸಂಬಂಧಪಟ್ಟವರಿಗೆ ಸಾರ್ವಜನಿಕವಾಗಿ ತಿಳಿಸುವುದೇನೆಂದರೆ, ಮೇಲಿನ ಅರ್ಜಿದಾರರನ್ನು ಹೊರತುಪಡಿಸಿ, ಮೃತನ ಅವಲಂಬಿತರಾಗಲೀ ಅಥವಾ ಕಾನೂನುಬದ್ಧ ವಾರಸುದಾರರಾಗಲೀ ಇದ್ದಲ್ಲಿ, ಈ ಸಂಬಂಧಪಟ್ಟವರು ತಮ್ಮದೇನಾದರೂ ಆಕ್ಷೇಪಣೆಗಳಿದ್ದಲ್ಲಿ ರಾಜ್ಯ ಪತ್ರದಲ್ಲಿ ಪ್ರಕಟವಾದ ಈ ಪ್ರಕಟಣೆಯ ದಿನಾಂಕದಿಂದ 30 ದಿನಗಳೊಳಗಾಗಿ ಲಿಖಿತ ಮೂಲಕ ಆಕ್ಷೇಪಣೆಗಳನ್ನು ಈ ನ್ಯಾಯಾಲಯದ ಮುಂದೆ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಆಕ್ಷೇಪಣೆಗಳನ್ನು ಪರಿಗಣಿಸುವುದಿಲ್ಲ.

**ಮೊಹಮದ್ ಶರೀಫ್**
ಕಾರ್ಮಿಕ ಅಧಿಕಾರಿ, ಉಪವಿಭಾಗ-2, ಬಳ್ಳಾರಿ ಜಿಲ್ಲೆ.

ಪಿ.ಆರ್.517

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪವಿಭಾಗ-2, ಬಳ್ಳಾರಿ**

**ಸಂಖ್ಯೆ:24: 05, ದಿನಾಂಕ:2ನೇ ಜನವರಿ, 2006**

**ಅರ್ಜಿದಾರರು:**

1. ಎನ್. ನಸೀಂ,
2. ರಜೀಯಾ,
3. ರಾಜಾಬಕ್ಷೀ,

ವಾಸ: ಕುರೇಕುಪ್ಪ, ಹೊಸಪೇಟೆ ರಸ್ತೆ, ಹೊಸಪೇಟೆ.

**ಪ್ರತಿವಾದಿಗಳು:**

1. ಶ್ರೀ ರಾಮಾಂಜನೇಯಲು ರೆಡ್ಡಿ, ಲಾರಿ ಮಾಲೀಕರು, ಎ.ಪಿ:02: ಯು:7619, ಕೃಷ್ಣಪುರಂ, ಅನಂತಪುರ ಜಿಲ್ಲೆ.
2. ದಿ ಮ್ಯಾನೇಜರ್ ನ್ಯಾಷನಲ್ ಇನ್ಸೂರೆನ್ಸ್ ಕಂಪನಿ ಲಿಮಿಟೆಡ್, ಬಳ್ಳಾರಿ.

**ಪ್ರಕಟಣೆ**

ಮೃತ ಕುಮಾರಸ್ವಾಮಿ ರವರು 1ನೇ ಪ್ರತಿವಾದಿ- ಮಾಲೀಕರ ಬಳಿ ಡ್ರೈವರ್ ಆಗಿ ಕೆಲಸ ಮಾಡುತ್ತಿದ್ದಾಗಲೇ ದಿನಾಂಕ:05.04.2004ರಂದು ಅಪಘಾತವಾಗಿ ಗಾಯಗೊಂಡು ದಿನಾಂಕ:05.04.2004ರಂದು ಮೃತಪಟ್ಟಿರುತ್ತಾರೆಂದು ಹೇಳಿ ಹಾಗೂ ತಾವು ಮಾತ್ರ ಮೃತನ ಅವಲಂಬಿತರೆಂದು ಹೇಳಿಕೊಂಡು ಈ ನ್ಯಾಯಾಲಯದ ಮುಂದೆ ಮೇಲಿನ ಅರ್ಜಿದಾರರು ಪರಿಹಾರ ಕೋರಿ ಅರ್ಜಿ ಸಲ್ಲಿಸಿರುತ್ತಾರೆ.

2. ಕಾರಣ, ಈ ಮೂಲಕ ಸಂಬಂಧಪಟ್ಟವರಿಗೆ ಸಾರ್ವಜನಿಕವಾಗಿ ತಿಳಿಸುವುದೇನೆಂದರೆ, ಈ ಮೇಲಿನ ಅರ್ಜಿದಾರರನ್ನು ಹೊರತುಪಡಿಸಿ, ಮೃತನ ಅವಲಂಬಿತರಾಗಲೀ ಕಾನೂನುಬದ್ಧ ವಾರಸುದಾರರಾಗಲೀ ಇದ್ದಲ್ಲಿ, ಈ ಸಂಬಂಧಪಟ್ಟವರು ತಮ್ಮದೇನಾದರೂ ಆಕ್ಷೇಪಣೆಗಳಿದ್ದಲ್ಲಿ ರಾಜ್ಯ ಪತ್ರದಲ್ಲಿ ಪ್ರಕಟವಾದ ಈ ಪ್ರಕಟಣೆಯ ದಿನಾಂಕದಿಂದ 30 ದಿನಗಳೊಳಗಾಗಿ ಲಿಖಿತ ಮೂಲಕ ಆಕ್ಷೇಪಣೆಗಳನ್ನು ಈ ನ್ಯಾಯಾಲಯದ ಮುಂದೆ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಆಕ್ಷೇಪಣೆಗಳನ್ನು ಪರಿಗಣಿಸುವುದಿಲ್ಲ.

**ಮೊಹಮದ್ ಶರೀಫ್**
ಕಾರ್ಮಿಕ ಅಧಿಕಾರಿ, ಉಪವಿಭಾಗ-2, ಬಳ್ಳಾರಿ ಜಿಲ್ಲೆ.

ಪಿ.ಆರ್.518

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪವಿಭಾಗ-2, ಬಳ್ಳಾರಿ ಜಿಲ್ಲೆ, ಬಳ್ಳಾರಿ**
**ಸಂಖ್ಯೆ:ಕಾಪಕಾ:135: 05, ದಿನಾಂಕ:6ನೇ ಫೆಬ್ರವರಿ, 2006**

**ಅರ್ಜಿದಾರರು:**
1. ಶ್ರೀ ಪಿ. ಒಬಣ್ಣ, ಕೋಂ ಪಾಪಯ್ಯ.
2. ಶ್ರೀಮತಿ ಸುರಮ್ಮ ಕೋಂ: ಒಬಣ್ಣ.
ವಾಸ: ಸುಬ್ಬರಾಯನಹಳ್ಳಿ ವಿಲೇಜ್, ಸಂಡೂರು ತಾಲ್ಲೂಕು, ಬಳ್ಳಾರಿ ಜಿಲ್ಲೆ.

**ಪ್ರತಿವಾದಿಗಳು:**
1. ಶ್ರೀ ಮೆಹಬೂಬು ಬಾಷಾ ಬಿನ್ ಎಂ. ಬುಡ್ಡನಸಾಬ್, ಲಾರಿ ಮಾಲೀಕರು, ಯಶಂತನಗರ, ಸಂಡೂರು ತಾಲ್ಲೂಕು, ಬಳ್ಳಾರಿ ಜಿಲ್ಲೆ.
2. ದಿ ಬ್ರಾಂಚ್ ಮ್ಯಾನೇಜರ್ ನ್ಯಾಷನಲ್ ಇನ್ಸೂರೆನ್ಸ್ ಕಂಪನಿ ಲಿಮಿಟೆಡ್, ಬಳ್ಳಾರಿ.

**ಪ್ರಕಟಣೆ**

ಶ್ರೀ ಮೃತ ಅನಿಲ್‌ಕುಮಾರ್ ಅಲಿಯಾಸ್ ಅನಿಲ್, ರವರು 1ನೇ ಪ್ರತಿವಾದಿಗಳ- ಮಾಲೀಕರ ಬಳಿ ಕ್ಲೀನರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗಲೇ ದಿನಾಂಕ:30.04.2005ರಂದು ಅಪಘಾತ ಸಂಭವಿಸಿ, ಅಪಘಾತದಿಂದ ಗಾಯಗಳಿಂದ ದಿನಾಂಕ:30.04.2005ರಂದು ಮೃತಪಟ್ಟಿರುತ್ತಾರೆಂದೂ ಹಾಗೂ ತಾವು ಮಾತ್ರ ಮೃತನ ಅವಲಂಬಿತರೆಂದು ಹೇಳಿಕೊಂಡು ಈ ನ್ಯಾಯಾಲಯದ ಮುಂದೆ ಮೇಲಿನ ಅರ್ಜಿದಾರರು ಪರಿಹಾರ ಕೋರಿ ಅರ್ಜಿ ಸಲ್ಲಿಸಿರುತ್ತಾರೆ.

2. ಕಾರಣ, ಈ ಮೂಲಕ ಸಂಬಂಧಪಟ್ಟವರಿಗೆ ಸಾರ್ವಜನಿಕವಾಗಿ ತಿಳಿಸುವುದೇನೆಂದರೆ, ಮೇಲಿನ ಅರ್ಜಿದಾರರನ್ನು ಹೊರತುಪಡಿಸಿ, ಮೃತನ ಅವಲಂಬಿತರಾಗಲೀ ಅಥವಾ ಕಾನೂನುಬದ್ಧ ವಾರಸುದಾರರಾಗಲೀ ಇದ್ದಲ್ಲಿ, ಈ ಸಂಬಂಧಪಟ್ಟವರು ತಮ್ಮದೇನಾದರೂ ಆಕ್ಷೇಪಣೆಗಳಿದ್ದಲ್ಲಿ ರಾಜ್ಯ ಪತ್ರದಲ್ಲಿ ಪ್ರಕಟವಾದ ಈ ಪ್ರಕಟಣೆಯ ದಿನಾಂಕದಿಂದ 30 ದಿನಗಳೊಳಗಾಗಿ ಲಿಖಿತ ಮೂಲಕ ಆಕ್ಷೇಪಣೆಗಳನ್ನು ಈ ನ್ಯಾಯಾಲಯದ ಮುಂದೆ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಆಕ್ಷೇಪಣೆಗಳನ್ನು ಪರಿಗಣಿಸುವುದಿಲ್ಲ.

**ಮೊಹಮದ್ ಶರೀಫ್**
ಕಾರ್ಮಿಕ ಅಧಿಕಾರಿ, ಉಪವಿಭಾಗ-2, ಬಳ್ಳಾರಿ ಜಿಲ್ಲೆ.

ಪಿ.ಆರ್.519

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪವಿಭಾಗ-2, ಬಳ್ಳಾರಿ ಜಿಲ್ಲೆ, ಬಳ್ಳಾರಿ**
**ಸಂಖ್ಯೆ:ಕಾಪಕಾ:167: 05, ದಿನಾಂಕ:13ನೇ ಫೆಬ್ರವರಿ, 2006**

**ಅರ್ಜಿದಾರರು:**
1. ಶ್ರೀಮತಿ ಶಂಶದ್ ಕೋಂ: ಎಸ್. ವಾಲಿ.
2. ಶಾಮ್‌ಬಿಜಾ ಬಿನ್ : ಎಸ್.ವಾಲಿ,
3. ಶಾಪಿಯ ಬಿನ್ ಎಸ್. ವಾಲಿ,
ವಾಸ: ಮಿಲ್ಲರ್‌ಪೇಟೆ ಬಳ್ಳಾರಿ.

**ಪ್ರತಿವಾದಿಗಳು:**
1. ಶ್ರೀ ಎ. ವೆಂಕಟೇಶಲು, ಬಿನ್ ಹೆಚ್. ತಿಮ್ಮಪ್ಪ ಲಾರಿ ಮಾಲೀಕರು, ಕೆಎ:35:4739, ವಾಸ: ಆರ್ ನಂ.5: ಬಂಡಿಮೋಟ್, ಬಳ್ಳಾರಿ.
2. ದಿ ಬ್ರಾಂಚ್ ಮ್ಯಾನೇಜರ್ ನ್ಯಾಷನಲ್ ಇನ್ಸೂರೆನ್ಸ್ ಕಂಪನಿ ಲಿಮಿಟೆಡ್, ಬಳ್ಳಾರಿ.

**ಪ್ರಕಟಣೆ**

ಶ್ರೀ ಮೃತ ಎಸ್.ವಾಲಿ ರವರು 1ನೇ ಪ್ರತಿವಾದಿಗಳ- ಮಾಲೀಕರ ಬಳಿ ಲಾರಿ ಡ್ರೈವರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗಲೇ ದಿನಾಂಕ:09.01.2005ರಂದು ಅಪಘಾತವಾಗಿ ಅಪಘಾತದಿಂದ ಗಾಯಗೊಂಡು ದಿನಾಂಕ:09.01.2005ರಂದು ಮೃತಪಟ್ಟಿರುತ್ತಾರೆಂದೂ ಹಾಗೂ ತಾವು ಮಾತ್ರ ಮೃತನ ಅವಲಂಬಿತರೆಂದು ಹೇಳಿಕೊಂಡು ಈ ನ್ಯಾಯಾಲಯದ ಮುಂದೆ ಮೇಲಿನ ಅರ್ಜಿದಾರರು ಪರಿಹಾರ ಕೋರಿ ಅರ್ಜಿ ಸಲ್ಲಿಸಿರುತ್ತಾರೆ.

2. ಕಾರಣ, ಈ ಮೂಲಕ ಸಂಬಂಧಪಟ್ಟವರಿಗೆ ಸಾರ್ವಜನಿಕವಾಗಿ ತಿಳಿಸುವುದೇನೆಂದರೆ, ಮೇಲಿನ ಅರ್ಜಿದಾರರನ್ನು ಹೊರತುಪಡಿಸಿ, ಮೃತನ ಅವಲಂಬಿತರಾಗಲೀ ಅಥವಾ ಕಾನೂನುಬದ್ಧ ವಾರಸುದಾರರಾಗಲೀ ಇದ್ದಲ್ಲಿ, ಈ ಸಂಬಂಧಪಟ್ಟವರು ತಮ್ಮದೇನಾದರೂ ಆಕ್ಷೇಪಣೆಗಳಿದ್ದಲ್ಲಿ ರಾಜ್ಯ ಪತ್ರದಲ್ಲಿ ಪ್ರಕಟವಾದ ಈ ಪ್ರಕಟಣೆಯ ದಿನಾಂಕದಿಂದ 30 ದಿನಗಳೊಳಗಾಗಿ ಲಿಖಿತ ಮೂಲಕ ತಮ್ಮ ಆಕ್ಷೇಪಣೆಗಳನ್ನು ಈ ನ್ಯಾಯಾಲಯದ ಮುಂದೆ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಆಕ್ಷೇಪಣೆಗಳನ್ನು ಪರಿಗಣಿಸುವುದಿಲ್ಲ.

**ಮೊಹಮದ್ ಶರೀಫ್**
ಕಾರ್ಮಿಕ ಅಧಿಕಾರಿ, ಉಪವಿಭಾಗ-2, ಬಳ್ಳಾರಿ ಜಿಲ್ಲೆ.

ಪಿ.ಆರ್.520

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪವಿಭಾಗ-2, ಬಳ್ಳಾರಿ ಜಿಲ್ಲೆ, ಬಳ್ಳಾರಿ**
**ಸಂಖ್ಯೆ:270: 05, ದಿನಾಂಕ:16ನೇ ಫೆಬ್ರವರಿ, 2006**

**ಅರ್ಜಿದಾರರು:**
1. ಶ್ರೀಮತಿ ಹಸೀನಾ ಖಾನಂ ಕೋಂ: ಹುಸೇನ್‌ಖಾನ್.
2. ಸತ್ತಾರ್‌ಖಾನ್, ಬಿನ್: ಹುಸೇನ್‌ಖಾನ್,
ವಾಸ: ಆಸ್ಪತ್ರೆ ರಸ್ತೆ, ಹುಲಿಯಾರ್, ತುಮಕೂರು ಜಿಲ್ಲೆ, ಹಾಲಿ: ವಾಸ: ಕೌಲ್ ಬಜಾರ್, ಬಳ್ಳಾರಿ.

**ಪ್ರತಿವಾದಿಗಳು:**
1. ಶ್ರೀ ಖಾಲಿಲುಖಾನ್ ಬಿನ್: ಬಷೀರ್‌ಅಹಮದ್‌ಖಾನ್, ಲಾರಿ ಮಾಲೀಕರು, ಕೆಎ:06:ಡಿ: 7776, ವಾಸ: ಆರ್.ಎಸ್.ಎಂ. ಪಾಳ್ಯ, ಶೀರಾಗೇಟ್, ತುಮಕೂರು ಜಿಲ್ಲೆ.
2. ಮೆ: ದಿ ಡಿವಿಜನಲ್ ಮ್ಯಾನೇಜರ್ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂಪನಿ ಲಿಮಿಟೆಡ್, ಬಳ್ಳಾರಿ.

**ಪ್ರಕಟಣೆ**

ಮೃತ ಮಹಮದ್ ಗೌಸ್‌ಖಾನ್ ರವರು 1ನೇ ಪ್ರತಿವಾದಿಗಳ- ಮಾಲೀಕರ ಬಳಿ ಅವರ ಲಾರಿಯಲ್ಲಿ ಕ್ಲೀನರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗಲೇ ದಿನಾಂಕ:10.06.2005ರಂದು ಅಪಘಾತವಾಗಿ ಗಾಯಗೊಂಡು ದಿನಾಂಕ:10.06.2005ರಂದು ಮೃತಪಟ್ಟಿರುತ್ತಾರೆಂದೂ ಹಾಗೂ ತಾವು ಮಾತ್ರ ಮೃತನ ಅವಲಂಬಿತರೆಂದು ಹೇಳಿಕೊಂಡು ಈ ನ್ಯಾಯಾಲಯದ ಮುಂದೆ ಮೇಲಿನ ಅರ್ಜಿದಾರರು ಪರಿಹಾರ ಕೋರಿ ಅರ್ಜಿ ಸಲ್ಲಿಸಿರುತ್ತಾರೆ.

2. ಕಾರಣ, ಈ ಮೂಲಕ ಸಂಬಂಧಪಟ್ಟವರಿಗೆ ಸಾರ್ವಜನಿಕವಾಗಿ ತಿಳಿಸುವುದೇನೆಂದರೆ, ಮೇಲಿನ ಅರ್ಜಿದಾರರನ್ನು ಹೊರತುಪಡಿಸಿ, ಮೃತನ ಅವಲಂಬಿತರಾಗಲೀ ಅಥವಾ ಕಾನೂನುಬದ್ದ ವಾರಸುದಾರರಾಗಲೀ ಇದ್ದಲ್ಲಿ, ಈ ಸಂಬಂಧಪಟ್ಟವರು ತಮ್ಮದೇನಾದರೂ ಆಕ್ಷೇಪಣೆಗಳಿದ್ದಲ್ಲಿ ರಾಜ್ಯ ಪತ್ರದಲ್ಲಿ ಪ್ರಕಟವಾದ ಈ ಪ್ರಕಟಣೆಯ ದಿನಾಂಕದಿಂದ 30 ದಿನಗಳೊಳಗಾಗಿ ಲಿಖಿತ ಮೂಲಕ ಆಕ್ಷೇಪಣೆಗಳನ್ನು ಈ ನ್ಯಾಯಾಲಯದ ಮುಂದೆ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಆಕ್ಷೇಪಣೆಗಳನ್ನು ಪರಿಗಣಿಸುವುದಿಲ್ಲ.

**ಮೊಹಮದ್ ಶರೀಫ್**

ಪಿ.ಆರ್.521 ಕಾರ್ಮಿಕ ಅಧಿಕಾರಿ, ಉಪವಿಭಾಗ-2, ಬಳ್ಳಾರಿ ಜಿಲ್ಲೆ.

## ಕರ್ನಾಟಕ ಲೋಕಸೇವಾ ಆಯೋಗ

**ವಿಷಯ:** 2005ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಯಲ್ಲಿ ಶ್ರೀಮತಿ ಉಮಾದೇವಿ, ದ್ವಿ.ದ.ಸ. ಸರ್ಕಾರಿ ಮುದ್ರಣಾಲಯ, ಗುಲ್ಬರ್ಗಾ ಇವರು ಎಸಗಿರುವ ದುರಾಚಾರಕ್ಕೆ ದಂಡನೆ ವಿಧಿಸುವ ಕುರಿತು.

**ಓದಲಾಗಿದೆ:** 1. ಶ್ರೀಮತಿ ಉಮಾದೇವಿ ಇವರು 2005ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಗೆ ಸಲ್ಲಿಸಿರುವ ಅರ್ಜಿ ದಿನಾಂಕ: 07.04.2005.

2. ಶ್ರೀಮತಿ ಉಮಾದೇವಿ ಇವರಿಗೆ ಜಾರಿ ಮಾಡಿದ ಹಿಂಬರಹ ಸಂಖ್ಯೆ: ಇಪ(1) 1660/ 2005-06/ ಪಿಎಸ್‌ಸಿ ದಿನಾಂಕ: 26.10.2005.

3. ಶ್ರೀಮತಿ ಉಮಾದೇವಿ ಇವರು ಆಯೋಗದ ಉಪಕಾರ್ಯದರ್ಶಿ ಇವರ ಮುಂದೆ ಖುದ್ದು ಹಾಜರಾಗಿ ನೀಡಿರುವ ಹೇಳಿಕೆ ದಿನಾಂಕ: 07.11.2005.

**ಪ್ರಸ್ತಾವನೆ:**

ಮೇಲೆ ಓದಲಾದ (1)ರನ್ವಯ ಶ್ರೀಮತಿ ಉಮಾದೇವಿ ಇವರು 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯಲ್ಲಿ ಪ್ರೆಸ್ ಅಂಡ್ ಅಲೈಡ್ ಆಫೀಸಸ್ ಮ್ಯಾನ್ಯುಯಲ್ ಹೈಯರ್ ಮತ್ತು ಲೋಯರ್ ಹಾಗೂ ಅಕೌಂಟ್ಸ್ ಹೈಯರ್ ಮತ್ತು ಲೋಯರ್ ವಿಷಯಗಳ ಪರೀಕ್ಷೆಗಳನ್ನು ತೆಗೆದುಕೊಂಡಿದ್ದು, ಅದರಂತೆ ಪರೀಕ್ಷೆ ಬರೆಯಲು ಪ್ರವೇಶಪತ್ರ ಜಾರಿ ಮಾಡಲಾಗಿತ್ತು. ಅದರಂತೆ ಸದರಿ ಅಭ್ಯರ್ಥಿ ಬರೆದಿರುವ ಪ್ರೆಸ್ ಅಂಡ್ ಅಲೈಡ್ ಆಫೀಸಸ್ ಮ್ಯಾನ್ಯುಯಲ್ ಹೈಯರ್ ಪತ್ರಿಕೆ-1ರ ಉತ್ತರ ಪತ್ರಿಕೆಯಲ್ಲಿ ಎರಡು ವಿಭಿನ್ನ ರೀತಿಯ ಬರವಣಿಗೆಯಿದ್ದ ಕಾರಣ ಸದರಿ ಉತ್ತರ ಪತ್ರಿಕೆಯನ್ನು ಮೌಲ್ಯಮಾಪನ ಮಾಡದೇ ಪರೀಕ್ಷಕರು ಹಿಂದಿರುಗಿಸಿದ್ದರು. ಈ ಬಗ್ಗೆ ವಿಚಾರಣೆ ಮಾಡಲು ಮೇಲೆ ಓದಲಾದ (2)ರಲ್ಲಿನ ಹಿಂಬರಹದಲ್ಲಿ ಸದರಿಯವರಿಗೆ ಈ ಸಂಬಂಧ ಕಾರ್ಯದರ್ಶಿಯವರ ಮುಂದೆ ದಿನಾಂಕ: 07.11.2005ರಂದು ಖುದ್ದಾಗಿ ಹಾಜರಾಗುವಂತೆ ತಪ್ಪಿದ್ದಲ್ಲಿ ಆಯೋಗ ತೆಗೆದುಕೊಳ್ಳುವ ನಿರ್ಣಯವೇ ಅಂತಿಮವಾಗಿರುತ್ತದೆಂದು ತಿಳಿಸಲಾಗಿತ್ತು. ಅದರಂತೆ ಸದರಿ ಅಭ್ಯರ್ಥಿ ಆ ದಿನಾಂಕದಂದು ಹಾಜರಾಗಿರುತ್ತಾರೆ. ಕಾರ್ಯದರ್ಶಿಯವರ ಸೂಚನೆಯಂತೆ ಆಯೋಗದ ಉಪಕಾರ್ಯದರ್ಶಿಯವರು ಸದರಿಯವರನ್ನು ವಿಚಾರಣೆ ಮಾಡಿದ್ದು, ಮೇಲೆ ಓದಲಾದ (3)ರ ಲಿಖಿತ ಹೇಳಿಕೆಯಲ್ಲಿ ಅಭ್ಯರ್ಥಿ ಸದರಿ ಪತ್ರಿಕೆಯಲ್ಲಿ ಬೇರೆಯವರಿಂದ ಬರೆಸಿರುವುದು ತಪ್ಪು ಎಂದು ಒಪ್ಪಿಕೊಂಡಿರುತ್ತಾರೆಂದು ವರದಿ ಸಲ್ಲಿಸಿರುತ್ತಾರೆ.

ಸದರಿ ಅಭ್ಯರ್ಥಿ ಪ್ರಥಮ ಹಂತದಲ್ಲಿಯೇ ತಪ್ಪೊಪ್ಪಿಗೆ ನೀಡಿರುವ ಹಿನ್ನೆಲೆಯಲ್ಲಿ ಪ್ರತ್ಯೇಕವಾಗಿ ವಿಚಾರಣಾಧಿಕಾರಿಯವರನ್ನು ನೇಮಕ ಮಾಡದೆ ಅಭ್ಯರ್ಥಿಯ ತಪ್ಪೊಪ್ಪಿಗೆ ಹೇಳಿಕೆ ಮತ್ತು ಉಪಕಾರ್ಯದರ್ಶಿಯವರ ವರದಿಯನ್ನು ಆಯೋಗದ ಮುಂದೆ ಮಂಡಿಸಿದ್ದು, ಅವರು ಕೂಲಂಕಷವಾಗಿ ಪರಿಶೀಲಿಸಿ ಕೆಳಗಿನಂತೆ ದಂಡನೆ ವಿಧಿಸಲು ಆದೇಶಿಸಿರುತ್ತಾರೆ.

**ಆದೇಶ ಸಂಖ್ಯೆ: ಇಪ(1) 2754/ 2005-06/ ಪಿಎಸ್‌ಸಿ, ಬೆಂಗಳೂರು, ದಿನಾಂಕ: 18ನೇ ಫೆಬ್ರವರಿ, 2006**

ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆ ನಿರ್ವಹಣೆ ನಿಯಮಗಳ 1965ರ ನಿಯಮ 14ರ ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾಗಿರುವ ಆಯೋಗದ ಅಧಿಕೃತಜ್ಞಾಪನ ಪತ್ರ ಸಂಖ್ಯೆ: ಆಡಳಿತ: 398/ 93-94/ ಪಿಎಸ್‌ಸಿ ದಿನಾಂಕ: 14.09.1993ರಲ್ಲಿ ಪ್ರದತ್ತವಾದ ಅಧಿಕಾರದ ಮೇರೆಗೆ ಶ್ರೀಮತಿ ಉಮಾದೇವಿ, ದ್ವಿ.ದ. ಸಹಾಯಕ, ಸರ್ಕಾರಿ ಮುದ್ರಣಾಲಯ ಗುಲ್ಬರ್ಗಾ ಇವರಿಗೆ 2005ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಗಳಿಗೆ ಅವರ ಅಭ್ಯರ್ಥಿತ್ವವನ್ನು ರದ್ದುಪಡಿಸುವುದರ ಜೊತೆಗೆ ಮುಂದಿನ ಎರಡು ಅಧಿವೇಶನಗಳ ಇಲಾಖಾ ಪರೀಕ್ಷೆಗಳಿಗೆ ಕೂರದಂತೆ ಅವರನ್ನು ಡಿಬಾರ್ ಮಾಡಲಾಗಿದೆ.

ಆಯೋಗದ ಆದೇಶದ ಮೇರೆಗೆ,

ಕಾರ್ಯದರ್ಶಿ ಹಾಗೂ

ಪಿ.ಆರ್.522 ನಿಯಂತ್ರಕರು ಇಲಾಖಾ ಪರೀಕ್ಷೆಗಳು,

ಕರ್ನಾಟಕ ಲೋಕಸೇವಾ ಆಯೋಗ.

## ಕರ್ನಾಟಕ ಲೋಕಸೇವಾ ಆಯೋಗ

**ವಿಷಯ:** 2005ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಯಲ್ಲಿ ಶ್ರೀ ಭರಮಪ್ಪ ನಿಂಗಪ್ಪ ಹೊಸೂರು, ಶ್ರೀ ನಾರಾಯಣ ವಿ. ಮಡಿವಾಳ ಮತ್ತು ಶ್ರೀ ಜಿ. ಜಾತಣ್ಣಗೌಡ, ಇವರುಗಳು ಎಸಗಿರುವ ಪರೀಕ್ಷಾ ದುರಾಚಾರ ಸಂಬಂಧ ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ:** 1. ಶ್ರೀ ಭರಮಪ್ಪ ನಿಂಗಪ್ಪ ಹೊಸೂರು, ಶ್ರೀ ನಾರಾಯಣ ವಿ. ಮಡಿವಾಳ ಮತ್ತು ಶ್ರೀ ಜಿ. ಜಾತಣ್ಣಗೌಡ ಇವರುಗಳು 2005ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಗೆ ಕ್ರಮವಾಗಿ ಇವರುಗಳು ಸಲ್ಲಿಸಿರುವ ಅರ್ಜಿಗಳ ದಿನಾಂಕ: 25.03.2005, 18.04.2005 ಮತ್ತು 09.04.2005 ಪರೀಕ್ಷೆಗೆ ಸಲ್ಲಿಸಿರುವ ಅರ್ಜಿ ದಿನಾಂಕ: 07.04.2005.

2. ಶ್ರೀ ಭರಮಪ್ಪ ನಿಂಗಪ್ಪ ಹೊಸೂರು, ಶ್ರೀ ನಾರಾಯಣ ವಿ. ಮಡಿವಾಳ ಮತ್ತು ಶ್ರೀ ಜಿ. ಜಾತಣ್ಣಗೌಡ ಇವರುಗಳಿಗೆ ಜಾರಿ ಮಾಡಿರುವ ಹಿಂಬರಹಗಳ ಸಂಖ್ಯೆ: ಇಪ(1) 1657-1659/ 2005-06/ ಪಿಎಸ್‌ಸಿ ದಿನಾಂಕ: 26.10.2005.

3. ಶ್ರೀ ಜಿ. ಜಾತಣ್ಣ ಗೌಡ ಇವರ ಹೇಳಿಕೆ ಪತ್ರ ದಿನಾಂಕ: 07.11.2005.

4. ಶ್ರೀ ಭರಮಪ್ಪ ನಿಂಗಪ್ಪ ಹೊಸೂರು ಇವರ ದಿನಾಂಕ: 07.11.2005ರ ಹೇಳಿಕೆ.

5. ಶ್ರೀ ನಾರಾಯಣ ವಿ. ಮಡಿವಾಳ ಇವರಿಂದ ಯಾವುದೇ ಹೇಳಿಕೆ ಇಲ್ಲ.

**ಪ್ರಸ್ತಾವನೆ:**

ಮೇಲೆ ಓದಲಾದ (1)ರನ್ವಯ 2005ರ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಗೆ (1) ಶ್ರೀ ಭರಮಪ್ಪ ನಿಂಗಪ್ಪ ಹೊಸೂರು, ಅರಣ್ಯ ರಕ್ಷಕ, ರೇಂಜ್ ಫಾರೆಸ್ಟ್ ಆಫೀಸರ್‌ರವರ ಕಛೇರಿ, ದುಂಡಶಿ, ಶಿಗ್ಗಾಂವ್ ತಾಲ್ಲೂಕು, ಹಾವೇರಿ ಜಿಲ್ಲೆ, ಇವರು ನೋಂದಣಿ ಸಂಖ್ಯೆ: 41248ರಡಿ ಫಾರೆಸ್ಟ್ ಪತ್ರಿಕೆ-2ರ ಪರೀಕ್ಷೆಗೆ ಹಾಜರಾಗಿರುತ್ತಾರೆ. (2) ಶ್ರೀ ನಾರಾಯಣ ವಿ. ಮಡಿವಾಳ, ಅರಣ್ಯ ರಕ್ಷಕ, ರೇಂಜ್ ಫಾರೆಸ್ಟ್ ಆಫೀಸರ್‌ರವರ ಕಛೇರಿ, ಕಿರುಹೊತ್ತಿ, ಯಲ್ಲಾಪುರ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ, ಇವರು ನೋಂದಣಿ ಸಂಖ್ಯೆ: 42272ರಡಿ ಫಾರೆಸ್ಟ್ ಪತ್ರಿಕೆ-2ರ ಪರೀಕ್ಷೆಗೆ ಹಾಜರಾಗಿರುತ್ತಾರೆ. ಮತ್ತು (3) ಶ್ರೀ ಜಿ. ಜಾತಣ್ಣಗೌಡ, ಅರಣ್ಯ ರಕ್ಷಕ, ರೇಂಜ್ ಫಾರೆಸ್ಟ್ ಆಫೀಸರ್‌ರವರ ಕಛೇರಿ, ಉಪ್ಪಿನಂಗಡಿ, ಪುತ್ತೂರು ತಾಲ್ಲೂಕು, ಮಂಗಳೂರು ಇವರು ನೋಂದಣಿ ಸಂಖ್ಯೆ: 47250ರಡಿ ಫಾರೆಸ್ಟ್ ಪತ್ರಿಕೆ-2ರ ಪರೀಕ್ಷೆಗೆ ಹಾಜರಾಗಿರುತ್ತಾರೆ.

ಫಾರೆಸ್ಟ್ ಪತ್ರಿಕೆ-2ರ ಮೌಲ್ಯಮಾಪನ ಮಾಡಿದ ಪರೀಕ್ಷಕರು ಮೇಲ್ಕಂಡ ಮೂವರು ಅಭ್ಯರ್ಥಿಗಳ ಉತ್ತರ ಪತ್ರಿಕೆಗಳಲ್ಲಿ ಬೇರೆ ಬೇರೆ ವಿಭಿನ್ನ ರೀತಿಯ ಬರವಣಿಗೆಗಳಿರುವುದನ್ನು ಗಮನಿಸಿ, ಈ ಬಗ್ಗೆ ಮುಂದಿನ ಕ್ರಮ ಕೈಗೊಳ್ಳುವಂತೆ ವರದಿ ಸಲ್ಲಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಮೇಲೆ ಓದಲಾದ (2)ರನ್ವಯ ಈ ಅಭ್ಯರ್ಥಿಗಳಿಗೆ ಹಿಂಬರಹಗಳನ್ನು ಜಾರಿ ಮಾಡಿ ಈ ಸಂಬಂಧ ಕಾರ್ಯದರ್ಶಿಯವರ ಮುಂದೆ ಖುದ್ದಾಗಿ ಹಾಜರಾಗಿ ವಿವರಣೆ ನೀಡುವಂತೆ ಸೂಚಿಸಲಾಗಿತ್ತು. ತಪ್ಪಿದ್ದಲ್ಲಿ ಆಯೋಗ ತೆಗೆದುಕೊಳ್ಳುವ ನಿರ್ಣಯವೇ ಅಂತಿಮವಾಗಿರುತ್ತದೆಂದು ತಿಳಿಸಲಾಗಿತ್ತು. ಕಾರ್ಯದರ್ಶಿಯವರ ಸೂಚನೆಯಂತೆ ಆಯೋಗದ ಉಪಕಾರ್ಯದರ್ಶಿಯವರು ಈ ಮೇಲ್ಕಂಡ ಅಭ್ಯರ್ಥಿಗಳನ್ನು ವಿಚಾರಣೆ ಮಾಡಿದ್ದು, ಮೇಲೆ ಓದಲಾದ (3)ರ ಶ್ರೀ ಜಿ. ಜಾತಣ್ಣ ಗೌಡ ಇವರು ಸದರಿ ಪತ್ರಿಕೆಯಲ್ಲಿ ಬೇರೆಯವರಿಂದ ಉತ್ತರ ಬರೆಸಿರುವುದಾಗಿ ತಮ್ಮ ತಪ್ಪನ್ನು ಒಪ್ಪಿಕೊಂಡಿರುತ್ತಾರೆ. ಅದೇ ರೀತಿ ಮೇಲೆ ಓದಲಾದ (4)ರ ಅಭ್ಯರ್ಥಿ ಶ್ರೀ ಭರಮಪ್ಪ ನಿಂಗಪ್ಪ ಹೊಸೂರು ಇವರು ಸಹ ಸದರಿ ಉತ್ತರ ಪತ್ರಿಕೆಯಲ್ಲಿ ಕೆಲವೊಂದು ಪ್ರಶ್ನೆಗಳ ಉತ್ತರಗಳನ್ನು ಬೇರೆಯವರಿಂದ ಬರೆಸಿರುವುದಾಗಿ ತಮ್ಮ ತಪ್ಪನ್ನು ಒಪ್ಪಿಕೊಂಡಿರುತ್ತಾರೆ. ಆದರೆ ಮೇಲೆ ಓದಲಾದ (5)ರ ಅಭ್ಯರ್ಥಿ ಶ್ರೀ ನಾರಾಯಣ ವಿ. ಮಡಿವಾಳ ಇವರು ಹಾಜರಾಗಿರುವುದಿಲ್ಲ. ಅಲ್ಲದೇ ಯಾವುದೇ ಲಿಖಿತ ಹೇಳಿಕೆಯನ್ನು ಸಲ್ಲಿಸಿರುವುದಿಲ್ಲವೆಂದು ವರದಿ ಮಾಡಿರುತ್ತಾರೆ.

ಶ್ರೀ ಜಿ. ಜಾತಣ್ಣಗೌಡ ಮತ್ತು ಶ್ರೀ ಭರಮಪ್ಪ ನಿಂಗಪ್ಪ ಹೊಸೂರು ರವರು ಪ್ರಾಥಮಿಕ ಹಂತದ ವಿಚಾರಣೆಯಲ್ಲಿಯೇ ತಮ್ಮ ತಪ್ಪುಗಳನ್ನು ಒಪ್ಪಿಕೊಂಡಿರುತ್ತಾರೆ. ಆದರೆ ಶ್ರೀ ನಾರಾಯಣ ವಿ. ಮಡಿವಾಳ ಇವರು ಯಾವುದೇ ಲಿಖಿತ ಹೇಳಿಕೆ ಸಲ್ಲಿಸದೇ ಮತ್ತು ಖುದ್ದಾಗಿ ಹಾಜರಾಗಿಲ್ಲದ ಕಾರಣ ಹಿಂಬರಹದಲ್ಲಿ ಸೂಚಿಸಿರುವಂತೆ ಆಯೋಗದ ತೀರ್ಮಾನಕ್ಕೆ ಮಂಡಿಸಲಾಗಿತ್ತು. ಆದಕಾರಣ, ಪ್ರತ್ಯೇಕವಾಗಿ ವಿಚಾರಣಾಧಿಕಾರಿಯನ್ನು ನೇಮಕ ಮಾಡದೆ ಅಭ್ಯರ್ಥಿಗಳ ತಪ್ಪೊಪ್ಪಿಗೆ ಮತ್ತು ಉಪಕಾರ್ಯದರ್ಶಿಯವರ ವರದಿಯನ್ನು ಆಯೋಗದ ಮುಂದೆ ಮಂಡಿಸಿದ್ದು, ಅವರುಗಳು ಕೂಲಂಕಷವಾಗಿ ಪರಿಶೀಲನೆ ಮಾಡಿ ಕೆಳಗಿನಂತೆ ದಂಡನೆ ವಿಧಿಸಲು ಆದೇಶಿಸಿರುತ್ತಾರೆ.

**ಆದೇಶ ಸಂಖ್ಯೆ: ಇಪ(1) 2756/ 2005-06/ ಪಿಎಸ್‌ಸಿ, ಬೆಂಗಳೂರು, ದಿನಾಂಕ:8ನೇ ಫೆಬ್ರವರಿ, 2006**

ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆ ನಿರ್ವಹಣೆ ನಿಯಮಗಳ 1965ರ ನಿಯಮ 14ರ ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾಗಿರುವ ಆಯೋಗದ ಅಧಿಕೃತಜ್ಞಾಪನ ಪತ್ರ ಸಂಖ್ಯೆ: ಆಡಳಿತ: 398/ 93-94/ ಪಿಎಸ್‌ಸಿ ದಿನಾಂಕ:14.09.1993ರಲ್ಲಿ ಪ್ರದತ್ತವಾದ ಅಧಿಕಾರದ ಮೇರೆಗೆ ಶ್ರೀ ಭರಮಪ್ಪ ನಿಂಗಪ್ಪ ಹೊಸೂರು, ಅರಣ್ಯ ರಕ್ಷಕ, ರೇಂಜ್ ಫಾರೆಸ್ಟ್ ಆಫೀಸ್‌ರವರ ಕಛೇರಿ, ದುಂಡಶಿ, ಶಿಂಗ್ಗಾಂವ್, ಹಾವೇರಿ ಜಿಲ್ಲೆ, ಶ್ರೀ ಜಿ. ಜಾತಣ್ಣಗೌಡ, ಅರಣ್ಯ ರಕ್ಷಕ, ರೇಂಜ್ ಫಾರೆಸ್ಟ್ ಆಫೀಸ್‌ರವರ ಕಛೇರಿ, ಉಪ್ಪಿನಂಗಡಿ, ಪುತ್ತೂರು ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ, ಹಾಗೂ ಶ್ರೀ ನಾರಾಯಣ ವಿ. ಮಡಿವಾಳ ಅರಣ್ಯ ರಕ್ಷಕ, ರೇಂಜ್ ಫಾರೆಸ್ಟ್ ಆಫೀಸ್‌ರವರ ಕಛೇರಿ, ಕಿರುಹೊತ್ತಿ, ಯಲ್ಲಾಪುರ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ ಇವರುಗಳಿಗೆ 2005ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಗಳಿಗೆ ಅವರ ಅಭ್ಯರ್ಥಿತ್ವವನ್ನು ರದ್ದುಪಡಿಸುವುದರ ಜೊತೆಗೆ ಮುಂದಿನ ಎರಡು ಅಧಿವೇಶನಗಳ ಇಲಾಖಾ ಪರೀಕ್ಷೆಗಳಿಗೆ ಕೂರದಂತೆ ಅವರನ್ನು ಡಿಬಾರ್ ಮಾಡಲಾಗಿದೆ.

ಆಯೋಗದ ಆದೇಶದ ಮೇರೆಗೆ,
ಕಾರ್ಯದರ್ಶಿ ಹಾಗೂ
ನಿಯಂತ್ರಕರು ಇಲಾಖಾ ಪರೀಕ್ಷೆಗಳು,
ಕರ್ನಾಟಕ ಲೋಕಸೇವಾ ಆಯೋಗ.

ಪಿ.ಆರ್.523

**ಕಂದಾಯ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ಕಂಇ 41 ಎಟಿಎಸ್ 2005, ಬೆಂಗಳೂರು, ದಿನಾಂಕ: 8ನೇ ಫೆಬ್ರವರಿ, 2006**

ಅಧಿಸೂಚನೆ ಸಂಖ್ಯೆ: ಕಂಇ 33 ಎಟಿಎಸ್ 2005 ದಿನಾಂಕ: 12.07.2005 ರಲ್ಲಿ ಶ್ರೀ ಗೋಪಾಲ್, ಶಾಖಾಧಿಕಾರಿ, ಕರ್ನಾಟಕ ಸರ್ಕಾರದ ಸಚಿವಾಲಯ ಇವರನ್ನು ತಹಶೀಲ್ದಾರ್ ನೆಲಮಂಗಲ, ಹುದ್ದೆಗೆ ಶ್ರೀ ಶ್ರೀಕಂಠಸ್ವಾಮಿ ಇವರ ಸ್ಥಾನದಲ್ಲಿ ನೇಮಿಸಿರುವುದನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಶ್ರೀ ಶ್ರೀಕಂಠಸ್ವಾಮಿ, ತಹಶೀಲ್ದಾರ್, ಇವರನ್ನು ಮುಂದಿನ ಆದೇಶದವರೆಗೆ ಹಾಲಿ ಕಾರ್ಯನಿರ್ವಹಿಸುತ್ತಿರುವ ತಹಶೀಲ್ದಾರ್, ನೆಲಮಂಗಲ ಹುದ್ದೆಯಲ್ಲಿ ಮುಂದುವರೆಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ವೆಂಕಟೇಶಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು-3)

ಪಿ.ಆರ್.527

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆಯಡಿ ಆಯುಕ್ತರು, ಗದಗ ಜಿಲ್ಲೆ, ಗದಗ್ ಇವರ ನ್ಯಾಯಾಲಯದಲ್ಲಿ

### ಸಂಖ್ಯೆ:ಕಾಅಗ: ಕಾನಪ: ಎಫ್-99: 05/ 1208, ದಿನಾಂಕ:16ನೇ ಫೆಬ್ರವರಿ, 2006

**ಅರ್ಜಿದಾರರು:**

1. ಶ್ರೀಮತಿ ಪುಟ್ಟವ್ವ ಕೋಂ: ಫಕೀರಪ್ಪ ತೋಟದ. ವಾಸ: ಮಾಗಡಿ, ಶಿರಹಟ್ಟಿ ತಾಲ್ಲೂಕು, ಗದಗ ಜಿಲ್ಲೆ.
2. ಶ್ರೀಮತಿ ಶಾಂತವ್ವ ಕೋಂ: ಗುಡ್ಡಪ್ಪ ತೋಟದ, ವಾಸ: ಮಾಗಡಿ, ಶಿರಹಟ್ಟಿ ತಾಲ್ಲೂಕು, ಗದಗ ಜಿಲ್ಲೆ.

**ಪ್ರತಿವಾದಿಗಳು:**

1) ಶ್ರೀ ಚಂದ್ರಶೇಖರ್ ಬಿನ್: ಹನುಮಂತಪ್ಪ-ಮರಿಯಮ್ಮನವರ, ವಾಸ: ತಳ್ಳಿಹಳ್ಳಿ, ಸವಣೂರು ತಾಲ್ಲೂಕು, ಹಾವೇರಿ ಜಿಲ್ಲೆ.

2) ದಿ ಬ್ರಾಂಚ್ ಮೇನೇಜರ್, ಶ್ರೀರಾಮ್ ಚಿಟ್ಸ್ ಪ್ರೈ.ಲಿಮಿಟೆಡ್, ಶಂಕರ್ ಸ್ಟೀಲ್ ಎಂಪೋರಿಯಂ, ಒಂದನೇ ಮಹಡಿ, ಸ್ಟೇಷನ್ ರಸ್ತೆ, ಗದಗ.

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ಪುಟ್ಟವ್ವ ಕೋಂ: ಫಕೀರಪ್ಪ ತೋಟದ ಮತ್ತು (2) ಶ್ರೀಮತಿ ಶಾಂತವ್ವ ಕೋಂ: ಗುಡ್ಡಪ್ಪ ತೋಟದ ಇವರು, ತಾವು ಮೃತ ಫಕೀರಪ್ಪ ಗುಡ್ಡಪ್ಪ ತೋಟದ, ಇವರ ಹೆಂಡತಿ ಮತ್ತು ತಾಯಿ ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಫಕೀರಪ್ಪ ಗುಡ್ಡಪ್ಪ ತೋಟದ ಇವರು ಒಂದನೇ ಪ್ರತಿವಾದಿಗಳಾದ ಶ್ರೀ ಚಂದ್ರಶೇಖರ್ ತಂದೆ: ಹನುಮಂತಪ್ಪ ಮರಿಯಮ್ಮನವರ, ಕ್ಲೀನರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ದ ಆಶ್ರೀತರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಯನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ಹಾಗೂ ಕರ್ಮಿಕ ನಷ್ಟ ಪರಿಹಾರ
ಕಾನೂನು ಅಡಿ ಆಯುಕ್ತರು, ಗದಗ್ ಜಿಲ್ಲೆ ಗದಗ್.

ಪಿ.ಆರ್.528

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ ಅಡಿ ಆಯುಕ್ತರು, ಗದಗ ಜಿಲ್ಲೆ, ಗದಗ್ ಇವರ ನ್ಯಾಯಾಲಯದಲ್ಲಿ

### ಸಂಖ್ಯೆ:ಕಾಅಗ: ಕಾನಪ: ಎಫ್-117: 05/ 1203, ದಿನಾಂಕ:10ನೇ ಫೆಬ್ರವರಿ, 2006

**ಅರ್ಜಿದಾರರು:**

1. ಶ್ರೀ ಚನ್ನಬಸಯ್ಯ ಎಸ್. ಚಕ್ಕಡಿಮಠ, ವಾಸ: ಹೆಸರೂರ ತಾಲ್ಲೂಕು, ಮುಂಡರಗಿ, ಜಿಲ್ಲೆ:ಗದಗ್.

**ಪ್ರತಿವಾದಿಗಳು:**

1) ವೀರಯ್ಯ ದುಂಡಯ್ಯ, ಹಿರೇಮಠ, ವಾಸ: ಹೆಸರೂರ ತಾಲ್ಲೂಕು: ಮುಂಡರಗಿ.

2) ದಿ ಬ್ರಾಂಚ್ ಮ್ಯಾನೇಜರ್, ನ್ಯಾಷನಲ್ ಇನ್ಸೂರೆನ್ಸ್ ಕಂ.ಲಿ., ರೇಣುಕಾ ಆರ್ಕಡ್ ಸ್ಟೇಷನ್ ರಸ್ತೆ, ಗದಗ್.

**ಪ್ರಕಟಣೆ**

ಅರ್ಜಿದಾರರಾದ ಶ್ರೀ ಚನ್ನಬಸಯ್ಯ ಎಸ್. ಚಕ್ಕಡಿಮಠ ವಾಸ: ಹೆಸರೂರು ಇವರು, ತಾವು ಮೃತ ಅಂದಯ್ಯ, ಇವರ ತಂದೆ ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಅಂದಯ್ಯ ಇವರು ಒಂದನೇ ಪ್ರತಿವಾದಿಗಳಾದ ವೀರಯ್ಯ ಹಿರೇಮಠ ಇವರಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ದ ಆಶ್ರೀತರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಯನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ಹಾಗೂ ಕರ್ಮಿಕ ನಷ್ಟ ಪರಿಹಾರ
ಕಾನೂನು ಅಡಿ ಆಯುಕ್ತರು, ಗದಗ್ ಜಿಲ್ಲೆ ಗದಗ್.

ಪಿ.ಆರ್.529

## ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಚಾಮರಾಜನಗರ ಜಿಲ್ಲೆ, ಚಾಮರಾಜನಗರ

### ಸಂಖ್ಯೆ:ಡಬ್ಲ್ಯೂಸಿಎ 32: 2006, ದಿನಾಂಕ:5ನೇ ಫೆಬ್ರವರಿ, 2006

### ಸಾರ್ವಜನಿಕ ನೋಟೀಸ್

**ಅರ್ಜಿದಾರರು:**

1. ಕಮಲಮ್ಮ ಕೋಂ ಕಮಲಕರ ಜೆಟ್ಟಪ್ಪ,
2. ಕಮಲಕರ ಜೆಟ್ಟಪ್ಪ ಬಿನ್ ಲೇಟ್ ಗೋವಿಂಧಜೆಟ್ಟಪ್ಪ, ಉರುಫ್: ಬಂಗಾರಸ್ವಾಮಿ ಜೆಟ್ಟಪ್ಪ. ನಂ.284, ಗಾಳೀಪುರ ಬಡಾವಣೆ, ಚಾಮರಾಜನಗರ ಟೌನ್.

**ಪ್ರತಿವಾದಿಗಳು:**

ಸೈಯದ್ ಖಲೀಮುಲ್ಲಾ, ಬಿನ್ ಲೇಟ್ ಸೈಯದ್ ಇಸ್ಮಾಯಿಲ್, ರಜಾಕಿಯ ಅಕ್ಕಿ ಗಿರಣಿ ಮಾಲೀಕರು, ಗಾಳೀಪುರ ಬಡಾವಣೆ, ಚಾಮರಾಜನಗರ ಟೌನ್.

ಮೃತ ರಾಘವೇಂದ್ರ ಇವರ ತಂದೆ ಮತ್ತು ತಾಯಿಯಾದ ಕಮಲಕರ ಜೆಟ್ಟಪ್ಪ ಮತ್ತು ಕಮಲಮ್ಮ ಇವರುಗಳು ಈ ನ್ಯಾಯಾಲಯದಲ್ಲಿ ದಿನಾಂಕ: 31.01.2006 ರಂದು ಅರ್ಜಿ ದಾಖಲಿಸಿ, ಮೃತ ರಾಘವೇಂದ್ರ ಎದುರುದಾರರ ಸಂಸ್ಥೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದ ಸಮಯದಲ್ಲಿ ದಿನಾಂಕ: 26.01.2006ರಂದು ಅಪಘಾತ ಸಂಭವಿಸಿ ಮೃತಪಟ್ಟಿರುತ್ತಾರೆಂದು ತಿಳಿಸಿದ್ದು, ಹಾಗೂ ಮೇಲೆ ತಿಳಿಸಿರುವ ಅರ್ಜಿದಾರರು ಮೃತನ ಆಶ್ರಿತರೆಂದು ತಮಗೆ ನಷ್ಟ ಪರಿಹಾರ ಕೊಡಿಸಿಕೊಡಬೇಕೆಂದು ಕ್ಲೈಂ ಅರ್ಜಿಯನ್ನು ದಾಖಲು ಮಾಡಿರುತ್ತಾರೆ.

ತತ್ಸಂಬಂಧವಾಗಿ ಸಮಸ್ತ ನಾಗರಿಕರಿಗೂ ಹಾಗೂ ಸದರಿ ಮೃತನ ಬೇರೆ ಅಶ್ರಿತರು ಯಾರಾದರೂ ಇದ್ದಲ್ಲಿ ಅವರಿಗೂ ಈ ಮೂಲಕ ತಿಳಿಯಪಡಿಸುವುದೇನೆಂದರೆ ಅವರು ಈ ನ್ಯಾಯಾಲಯದ ಮುಂದೆ ಈ ಪ್ರಕಟಣೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ಮೂವತ್ತು ದಿನಗಳೊಳಗಾಗಿ ನಷ್ಟ ಪರಿಹಾರಕ್ಕೆ ಅರ್ಜಿ ಹಾಕಿಕೊಳ್ಳಬಹುದೆಂದು ತಿಳಿಯಪಡಿಸಲಾಗಿದೆ. ಅವಧಿ ಮೀರಿ ಬಂದ ಅರ್ಜಿಯನ್ನು ಮಾನ್ಯ ಮಾಡಲಾಗುವುದಿಲ್ಲ.

**ಪಿ. ವಿಜಯದೇವನಾಯ್ಕ**

ಪಿ.ಆರ್.530

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಚಾಮರಾಜನಗರ ಜಿಲ್ಲೆ.

## ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಚಾಮರಾಜನಗರ ಜಿಲ್ಲೆ, ಚಾಮರಾಜನಗರ
## ಸಂಖ್ಯೆ:ಡಬ್ಲ್ಯೂಸಿಎ:33: 2006, ದಿನಾಂಕ:9ನೇ ಫೆಬ್ರವರಿ, 2006
## ಸಾರ್ವಜನಿಕ ನೋಟೀಸ್

**ಅರ್ಜಿದಾರರು:**

1. ಶ್ರೀಮತಿ ವಿಜಯಲಕ್ಷ್ಮೀ, ಕೋಂ ಲೇಟ್ ಪ್ರಕಾಶ್
2. ಉ: ಸೂರ್ಯ ಪ್ರಕಾಶ್,
3. ಕು: ಪ್ರಿಯಾ,
4. ಕು: ಪ್ರೀತಿ,

ರಾಮಸಮುದ್ರ, ಚಾಮರಾಜನಗರ ತಾಲ್ಲೂಕು
ಮತ್ತು ಜಿಲ್ಲೆ.

**ಪ್ರತಿವಾದಿಗಳು:**

ಸೈಯದ್ ಕಫಾಯತ್ ಉಲ್ಲಾ ಬಿನ್ ಸೈಯದ್ ಅಮಾನುಲ್ಲಾ,
ನಂ.1576, ಈಸ್ಟ್ ಎಂಡ್ ಮುಖ್ಯ ರಸ್ತೆ, ತಿಲಕ್ ನಗರ, ಬೆಂಗಳೂರು.

ಮೃತ ಪ್ರಕಾಶ್ ಉ: ಸೂರ್ಯಪ್ರಕಾಶ್ ಇವರ ಹೆಂಡತಿಯಾದ ಶ್ರೀಮತಿ ವಿಜಯಲಕ್ಷ್ಮಿ ಮತ್ತು ಮಕ್ಕಳಾದ ಪ್ರಿಯಾ ಮತ್ತು ಪ್ರೀತಿ ದಿನಾಂಕ: 08.02.2006ರಂದು ಅರ್ಜಿದಾಖಲಿಸಿ, ಮೃತ ಪ್ರಕಾಶ್ ಉ: ಸೂರ್ಯಪ್ರಕಾಶ್ ಇವರು ಪ್ರತಿವಾದಿಗಳ ವಾಹನದಲ್ಲಿ ಚಾಲಕನಾಗಿ ಕರ್ತವ್ಯ ನಿರ್ವಹಿಸುತ್ತಿದ್ದ ಸಮಯದಲ್ಲಿ ದಿನಾಂಕ:19.09.2004ರಂದು ಅಪಘಾತ ಸಂಭವಿಸಿ ಮೃತಪಟ್ಟಿರುತ್ತಾರೆಂದು ತಿಳಿಸಿದ್ದು, ಹಾಗೂ ಮೇಲೆ ತಿಳಿಸಿರುವ ಅರ್ಜಿದಾರರು ಮೃತನ ಆಶ್ರಿತರೆಂದು ತಮಗೆ ನಷ್ಟ ಪರಿಹಾರ ಕೊಡಿಸಿಕೊಡಬೇಕೆಂದು ಕ್ಲೈಂ ಅರ್ಜಿಯನ್ನು ದಾಖಲು ಮಾಡಿರುತ್ತಾರೆ.

ತತ್ಸಂಬಂಧವಾಗಿ ಸಮಸ್ತ ನಾಗರೀಕರಿಗೂ ಹಾಗೂ ಸದರಿ ಮೃತನ ಬೇರೆ ಅಶ್ರಿತರು ಯಾರಾದರೂ ಇದ್ದಲ್ಲಿ ಅವರಿಗೂ ಈ ಮೂಲಕ ತಿಳಿಯಪಡಿಸುವುದೇನೆಂದರೆ ಅವರು ಈ ನ್ಯಾಯಾಲಯದ ಮುಂದೆ ಈ ಪ್ರಕಟಣೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ಮೂವತ್ತು ದಿನಗಳೊಳಗಾಗಿ ನಷ್ಟ ಪರಿಹಾರಕ್ಕೆ ಅರ್ಜಿ ಹಾಕಿಕೊಳ್ಳಬಹುದೆಂದು ತಿಳಿಯಪಡಿಸಲಾಗಿದೆ. ಅವಧಿ ಮೀರಿ ಬಂದ ಅರ್ಜಿಯನ್ನು ಮಾನ್ಯ ಮಾಡಲಾಗುವುದಿಲ್ಲ.

**ಪಿ. ವಿಜಯದೇವನಾಯ್ಕ**

ಪಿ.ಆರ್.531

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಚಾಮರಾಜನಗರ ಜಿಲ್ಲೆ.

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದಕ್ಷಿಣ ಕನ್ನಡ ಉಪವಿಭಾಗ-1, ಬೆಂದೂರ್‌ವೆಲ್, ಕಂಕನಾಡಿ, ಮಂಗಳೂರು-ಇವರ ನ್ಯಾಯಾಲಯ
## ಸಂಖ್ಯೆ:ಡಬ್ಲ್ಯೂಸಿಎ:ಸಿಆರ್-9: 2006 ಎಫ್, ದಿನಾಂಕ:13ನೇ ಫೆಬ್ರವರಿ, 2006

**ಅರ್ಜಿದಾರರು:**

1. ಶ್ರೀಮತಿ ಅಲೀಮಮ್ಮ
2. ಶ್ರೀಮತಿ ಸೋಸಮ್ಮ
3. ಶ್ರೋ ಜೋಸಫ್

ಮನೆ ನಂ. 1-148 ತಕದಿಯಾಲ್ ಹೌಸ್,
ದೇವಿನಗರ ಕುಂಜತ್ತಬೈಲ್, ಮಂಗಳೂರು.

**ವಿರುದ್ಧ**

**ಪ್ರತಿವಾದಿಗಳು:**

ದಿ ಚಯರ್‌ಮ್ಯಾನ್ ಎನ್‌ಎಂಪಿಟಿ, ಪಣಂಬೂರು, ಮಂಗಳೂರು.

### ಅಧಿಸೂಚನೆ

ಅರ್ಜಿದಾರಳಾದ ಶ್ರೀಮತಿ ಅಲೀಮಮ್ಮ ಇವರು ತಮ್ಮ ಗಂಡನಾದ ಶ್ರೀ ತಂಗಚ್ಚನ್ ಇವರು 1ನೇ ಪ್ರತಿವಾದಿಗಳಾದ ಶ್ರೀ ಚಯರ್‌ಮ್ಯಾನ್ ಎನ್‌ಎಂಪಿಟಿ, ಪಣಂಬೂರು, ಮಂಗಳೂರು ಇವರಲ್ಲಿ ಕೆಲಸಗಾರರಾಗಿದ್ದು ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ: 06.10.2005 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮು ಅರ್ಜಿ/ ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

**ಎಸ್.ಸಿ. ರಾಮಚಂದ್ರ**

ಪಿ.ಆರ್.532

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ದಕ್ಷಿಣ ಕನ್ನಡ ಉಪ ವಿಭಾಗ-1, ಮಂಗಳೂರು.

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ-2, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು-03

### ಸಂಖ್ಯೆ:ಡಿಆರ್‌ಬಿ/ 2/ ಸಮಾಪನೆ/ 27/ 2005-06, ದಿನಾಂಕ:16ನೇ ಫೆಬ್ರವರಿ, 2006

**ವಿಷಯ:** ಸಮಾಪನೆಯಲ್ಲಿರುವ ಬಿಟಿಎಸ್ ನೌಕರರ (ಕೆ.ಎಸ್.ಆರ್.ಟಿ.ಸಿ.) ಸಹಕಾರ ಉಪಹಾರ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ, ದೀಪಾಂಜಲಿ ನಗರ, ಬೆಂಗಳೂರು, ಇದರ ನೋಂದಣಿ ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿ ಆದೇಶ ಸಮಸಂಖ್ಯೆ: ದಿನಾಂಕ: 30.06.2005.

2) ಈ ಕಛೇರಿ ಆದೇಶ ಸಂಖ್ಯೆ: ಡಿಆರ್‌ಬಿ-2/ ಸಮಾಪನೆ/ 57/ 2005-06, ದಿನಾಂಕ: 05.11.2005.

3) ಸಹಕಾರ ಸಂಘಗಳ ಸಹಾಯಕ ನಿಬಂಧಕರು, 2ನೇ ವಲಯ ಬೆಂಗಳೂರು ಇವರ ಪ್ರಸ್ತಾವ ಸಂಖ್ಯೆ: ಎಆರ್‌ಬಿ-45/ ಸಮಾಪನೆ/ 3/ 05-06, ದಿನಾಂಕ: 09.01.2006.

**ಪ್ರಸ್ತಾವನೆ:**

ಮೇಲೆ ಉಲ್ಲೇಖ-1ರಲ್ಲಿರುವ ಆದೇಶದಂತೆ ಬಿಟಿಎಸ್ ನೌಕರರ (ಕೆ.ಎಸ್.ಆರ್.ಟಿ.ಸಿ.) ಸಹಕಾರ ಉಪಹಾರ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ, ದೀಪಾಂಜಲಿ ನಗರ, ಬೆಂಗಳೂರು-27, ಇದನ್ನು ಸಮಾಪನೆಗೊಳಿಸಿ ಸಮಾಪನಾಧಿಕಾರಿಯನ್ನು ನೇಮಿಸಿದ್ದು, ಉಲ್ಲೇಖ-2 ರಲ್ಲಿರುವ ಆದೇಶದಲ್ಲಿ ಸಮಾಪನಾಧಿಕಾರಿಯನ್ನು ಬದಲಾಯಿಸಲಾಗಿತ್ತು. ಹಾಲಿ ಸಮಾಪನಾಧಿಕಾರಿಯವರು ಸದರಿ ಸಂಘದ ಸ್ವಯಂ ಪ್ರಭಾರ ವಹಿಸಿಕೊಂಡು, ಸಂಘದ ಯಾವುದೇ ದಾಖಲಾತಿಗಳು ಲಭ್ಯವಿಲ್ಲದೇ ಇರುವುದರಿಂದ, ಆಸ್ತಿ-ಜವಾಬ್ದಾರಿಗಳು ಶೂನ್ಯವಾಗಿರುವುದರಿಂದ ಮತ್ತು ಸಂಘವನ್ನು ಪುನಃಶ್ಚೇತನಗೊಳಿಸಲು ಯಾರೂ ಆಸಕ್ತಿ ವಹಿಸದಿರುವುದರಿಂದ, ಸದರಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಉಲ್ಲೇಖ-3 ರಲ್ಲಿರುವ ಪ್ರಸ್ತಾವನದಲ್ಲಿ ಶಿಫಾರಸ್ಸು ಮಾಡಿರುತ್ತಾರೆ. ಮೇಲೆ ತಿಳಿಸಿದ ಪ್ರಸ್ತಾವವನ್ನು ಪರಿಶೀಲಿಸಿ, ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 75ರಲ್ಲಿ ಪ್ರತ್ಯಾಯೋಜನೆಯಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಸಹಕಾರ ಸಂಘಗಳ ಉಪನಿಬಂಧಕರು-2, ಬೆಂಗಳೂರು ನಗರ ಜಿಲ್ಲೆ, ಆದ ನಾನು ಬಿಟಿಎಸ್ ನೌಕರರ (ಕೆ.ಎಸ್.ಆರ್.ಟಿ.ಸಿ.) ಸಹಕಾರ ಉಪಹಾರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು, ಇದರ ನೋಂದಣಿ ಸಂಖ್ಯೆ: ಎಆರ್‌ಬಿ-45/ ನೋಂದಣಿ/ 22785/ 95-96, ದಿನಾಂಕ:10.10.1995 ರದ್ದುಗೊಳಿಸಿರುತ್ತೇನೆ. ಇದರಿಂದಾಗಿ ಈ ಸಂಘವು ಈ ಆದೇಶ ದಿನಾಂಕದಿಂದ ವಿಸರ್ಜನೆಯಾಗಿರುತ್ತದೆ. ಮತ್ತು ಈ ಆದೇಶದ ದಿನಾಂಕದಿಂದ ವಿಸರ್ಜನೆಯಾಗಿದ್ದು, ಸಂಘ-ಸಂಸ್ಥೆಯಾಗಿರುವುದು (ಕಾರ್ಪೋರೇಷನ್ ಬಾಡಿ) ನಿಂತು ಹೋಗಿರುತ್ತದೆ.

ಈ ಆದೇಶವನ್ನು ನನ್ನ ಸ್ವಸಹಿ ಮತ್ತು ಈ ಕಛೇರಿ ಮೊಹರಿನೊಂದಿಗೆ ದಿನಾಂಕ: 16.02.2006 ರಂದು ಹೊರಡಿಸಲಾಗಿದೆ.

**ಭೀಮಸೇನ ಬಂಕದ**

ಪಿ.ಆರ್.533

ಸಹಕಾರ ಸಂಘಗಳ ಉಪನಿಬಂಧಕರು-2,
ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು.

### ಪ್ರಾಧೀಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು ಇ.ಐ.ಬಿ. ಬಿಜಾಪುರ ಜಿಲ್ಲೆ, ಬಿಜಾಪುರ ರವರ ಕಛೇರಿ ನಡುವಳಿಗಳು

### ಗುನ್ನೆ ನಂ.33/ 2003-04, ದಿನಾಂಕ:2ನೇ ಜನವರಿ, 2004

### ಅಬಕಾರಿ ಉಪ ನಿರೀಕ್ಷಕರು ಬಿಜಾಪುರ ಉಪವಿಭಾಗ, ಬಿಜಾಪುರ

### ನಂ.ಇಎಕ್ಸ್‌ಇ: ಬಿಜೆಪಿ: ಡಿಟಿಸಿಆರ್:111: 2003-04, ದಿನಾಂಕ:25ನೇ ಜನವರಿ, 2006

**ಉಪಸ್ಥಿತರು:** ಕೆ.ಆರ್. ಗೌಡ್ರ, ಪ್ರಾಧೀಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇ.ಐ.ಬಿ. ಬಿಜಾಪುರ ಜಿಲ್ಲೆ, ಬಿಜಾಪುರ.

**ಪಿರ್ಯಾಧಿದಾರರು:**
ಅಬಕಾರಿ ಉಪ ನಿರೀಕ್ಷಕರು,
ಬಿಜಾಪುರ ಉಪ ವಿಭಾಗ, ಬಿಜಾಪುರ.

ವಿರುದ್ಧ

**ಆರೋಪಿತರು:**

1. ನಾಗಪ್ಪ ತಂದೆ ಭೀಮಪ್ಪ ಜುಮನಳ ಸಾ: ತಿಕೋಟಾ, ತಾ:ಮತ್ತು ಜಿ: ಬಿಜಾಪುರ.
2. ಅಮರಯ್ಯ ಮಾಳಯ್ಯ ಹಿರೇಮಠ ಎರಡನೇ ಡ್ರೈವರ್, ಸಾ:ಸಂತೆಕಲ್ಲೂರ, ತಾ: ಲಿಂಗಸೂರ, ಜಿ: ರಾಯಚೂರು.
3. ರಮೇಶ ತಂದೆ: ಧನಸಿಂಗ್ ರಾಠೋಡ್, ಕ್ಲೀನರ್, ಸಾ:ಜಾಬಾ, ಬೋರಿ, ರಾಜಸ್ಥಾನ್,

**ಅರ್ಜಿದಾರರು/ ವಾಹನ ಮಾಲೀಕರು:**

1. ಶ್ರೀನಿವಾಸ ಕೆ.ಕೆ. ನಂ.37, ಈಡನ್‌ರಾಕ್, ಯಲ್ಲಪ್ಪ ಛಟ್ಟಿ ಉಲಸೂರ, ಬೆಂಗಳೂರು-42. (ಟಾಟಾ ಇಂಡಿಕಾ ಕಾರದ ವಾಹನ ಮಾಲೀಕರು).

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 31.12.2003 ರಂದು ಅಬಕಾರಿ ಜಂಟಿ ಆಯುಕ್ತರು (ಜಾರಿ ಮತ್ತು ತನಿಖೆ) ಬೆಳಗಾಂವ್ ವಿಭಾಗ ಬೆಳಗಾಂವ್ ರವರ ಕಛೇರಿಯಲ್ಲಿ ತಮ್ಮ ಸಿಬ್ಬಂದಿ ಮಧ್ಯಾಹ್ನ 12-45ಕ್ಕೆ ಕರೆಯಿಸಿ, ಅರ್ಜಂಟಾಗಿ ಭಾತ್ಮಿ ಬಂದಿದೆ ಅಂತಾ ಮೌಖಿಕವಾಗಿ ತಿಳಿಸಿ, ಅವರ ಮತ್ತು ಸಿಬ್ಬಂದಿ ಜನರೊಂದಿಗೆ ಅವರ ಕಛೇರಿ ವಾಹನ ಸಂಖ್ಯೆ: ಕೆಎ-22-ಜಿ-277 ರಲ್ಲಿ ಬೆಳಗಾಂವ್ ಮಧ್ಯಾಹ್ನ 1-15ಕ್ಕೆ ಬಿಟ್ಟು ಎಲ್ಲಿಯೂ ನಿಲ್ಲದೇ ಬಿಜಾಪುರಕ್ಕೆ ಬಂದು ಆಗ ಸಮಯ ಸಂಜೆ 5.00 ಗಂಟೆಯಾಗಿತ್ತು. ಸದರಿ ಅಧಿಕಾರಿಗಳು ರಾಷ್ಟ್ರೀಯ ಹೆದ್ದಾರಿ-13ರ ಬಿಜಾಪುರ ಬೈಪಾಸ್ ರಸ್ತೆಯಲ್ಲಿ ಬಂದಾಗ ಸೋಲ್ಲಾಪುರದ ಕಡೆಯಿಂದ ಕೆಎ-03-ಝಡ್-705 ನಂಬರಿನ ಟಾಟಾ ಇಂಡಿಕಾ ಬೆಳ್ಳಿ ಬಣ್ಣದ ಕಾರು ಬರುತ್ತದೆ. ಆ ಕಾರಿನಲ್ಲಿ ಇಬ್ಬರು ವ್ಯಕ್ತಿಗಳು ಇರುತ್ತಾರೆ. ಈ ವ್ಯಕ್ತಿಗಳು ರಾಷ್ಟ್ರೀಯ ಹೆದ್ದಾರಿ-13 ರಲ್ಲಿ ಅಬಕಾರಿ-ವ- ಪೊಲೀಸ್ ಅಧಿಕಾರಿಗಳು ಯಾರಾದರೂ ರಸ್ತೆ ಕಾವಲು ನಡೆಸುತ್ತಿದ್ದಾರೆಯೇ

ಅಂತಾ ತಿಳಿದು ಯಾವುದೇ ಅಧಿಕಾರಿಗಳು ರಸ್ತೆಯ ಮೇಲೆ ಕಾವಲು ಇಲ್ಲದ ಸಮಯದಲ್ಲಿ ಗ್ಯಾಸ್ ಟ್ಯಾಂಕರ್ ಮೂಲಕ ತೆರಿಗೆ ಕೊಡದ ಮದ್ಯವನ್ನು ಕಳ್ಳತನದಿಂದ ಸಾಗಾಟ ಮಾಡಿಸುತ್ತಿದ್ದಾರೆ ಆದ್ದರಿಂದ ನೀವು ದಿನಾಂಕ: 31.12.2003 ರಂದು ಸಂಜೆ 5.00 ರಿಂದ ದಿನಾಂಕ: 01.01.2004ರ ಮಧ್ಯ ರಾತ್ರಿ 12.00 ಗಂಟೆವರೆಗೆ ಮರೆಯಾಗಿ ಕುಳಿತು ರಸ್ತೆ ಕಾವಲು ನಡೆಸಿದಲ್ಲಿ ಕಳ್ಳತನದಿಂದ ಸಾಗಾಟ ಮಾಡುವಂತಹ ಮದ್ಯವನ್ನು ತುಂಬಿದ ಗಾಡಿಯನ್ನು ಹಿಡಿಯಬಹುದು ಎಂಬ ಖಚಿತವಾದ ಭಾತ್ಮಿ ಬಂದಿರುವುದರಿಂದ ಮತ್ತು ಪೈಲಟ್ ಮಾಡುತ್ತಿರುವ ಕಾರಿನ ನಂಬರ್ ಮಾತ್ರ ಗೊತ್ತಿದೆ ಆದರೆ ಗ್ಯಾಸ್ ಟ್ಯಾಂಕರಿನ ನಂಬರ್ ತಿಳಿದು ಬಂದಿರುವುದಿಲ್ಲಾ ಏಕೆಂದರೆ ಗಾಡಿಯ ನಂಬರ್ ಪ್ಲೇಟ್‌ಗಳನ್ನು ಆಗಿಂದ್ದಾಗ ಬದಲಾಯಿಸುತ್ತಿರುತ್ತಾರೆ. ಅಂತಾ ಭಾತ್ಮಿ ಇರುವುದರಿಂದ ಪೈಲಟ್ ಮಾಡುತ್ತಿರುವ ಕಾರನ್ನು ಹಿಡಿದು ಅದರಲ್ಲಿರುವ ವ್ಯಕ್ತಿಗಳನ್ನು ನಾವು ವಿಚಾರಣೆಗೆ ಒಳಪಡಿಸಬೇಕು ಅಂತಾ ಅಬಕಾರಿ ಜಂಟಿ ಆಯುಕ್ತರು ಸಿಬ್ಬಂದಿಗೆ ತಿಳಿಸಿ ಹೇಳಿದರು. ಆ ದಿವಸ ದಿನಾಂಕ: 31.12.2003 ರಂದು ಸಂಜೆ 5.00 ಗಂಟೆಯಿಂದ ರಾಷ್ಟ್ರೀಯ ಹೆದ್ದಾರಿ:13ರ ಸೋಲ್ಲಾಪುರ-ಬಿಜಾಪುರ ರಸ್ತೆಯ ಬಿಜಾಪುರ ಬಳಿ ಇರುವ ಭೂತನಾಳ ಹಳ್ಳದ ಸೇತುವೆಯ ಹತ್ತಿರ ನಿಂತು ಸತತವಾಗಿ ರಸ್ತೆ ಕಾವಲು ಮಾಡುತ್ತಿದ್ದಾಗ ದಿನಾಂಕ: 01.01.2004ರಂದು ಸಂಜೆ 4.00 ಗಂಟೆ ಸುಮಾರಿಗೆ ಸೋಲ್ಲಾಪುರದ ಕಡೆಯಿಂದ ಮೇಲ್ಕಾಣಿಸಿದ ಟಾಟಾ ಇಂಡಿಕಾ ಕಾರು ಬರುವುದನ್ನು ಕಂಡು ಅಡ್ಡಗಟ್ಟಿ ತಡೆದು ನಿಲ್ಲಿಸಿದರು. ಆ ಕಾರಿನಲ್ಲಿ ಇಬ್ಬರು ವ್ಯಕ್ತಿಗಳು ಕುಳಿತಿದ್ದರು. ಅವರ ಹೆಸರು ಮತ್ತು ವಿಳಾಸವನ್ನು ವಿಚಾರಿಸಿದರು, ಆ ಕಾರು ಚಾಲನೆ ಮಾಡುತ್ತಿದ್ದ ಚಾಲಕನು ತನ್ನ ಹೆಸರು ಅಮರಯ್ಯಾ ಎಂತಲು ತಾನು ಲಿಂಗಸೂರ ವಾಸಿ ಎಂದು ತಿಳಿಸಿದನು. ಚಾಲಕನ ಪಕ್ಕದಲ್ಲಿ ಕುಳಿತಿದ್ದ ಆಸಾಮಿ ತನ್ನ ಹೆಸರು ನಾಗಪ್ಪಾ ಎಂತಲೂ ತಾನು ಹೊಸಪೇಟೆ ವಾಸಿ ಅಂತಾ ತಿಳಿಸಿದ ನೀವು ಎಲ್ಲಿಗೆ ಹೋಗಿದ್ದೀರಿ ಮತ್ತು ಎಲ್ಲಿಂದ ಬಂದಿರಿ? ಮುಂದೆ ಎಲ್ಲಿಗೆ ಹೋಗುತ್ತಿರುವಿರಿ? ಈ ಕಾರು ಯಾರದು? ಎಂದು ವಿಚಾರಿಸಿದಾಗ ಈ ಕಾರು ಹೊಸಪೇಟೆಯ ಕೆ.ಎಂ. ನಾಗರಾಜ ಇವರಿಗೆ ಸಂಬಂಧಿಸಿದ್ದು, ನಾವು ಕಾರ್ಯ ನಿಮಿತ್ಯ ಬಿಜಾಪುರಕ್ಕೆ ಬಂದಿದ್ದೇವು ಅಂತಲೂ ಮತ್ತು ಕೆಲಸ ಮುಗಿಸಿ ಕೊಡಮು ಹೊಸಪೇಟೆಗೆ ಹಿಂದುರುಗುವವರಿದ್ದೇವೆ ಎಂದು ತಿಳಿಸಿದರು. ಈ ಇಬ್ಬರು ವ್ಯಕ್ತಿಗಳ ಉತ್ತರ ಸಮರ್ಪಕವಾಗಿ ಕಂಡುಬರದೇ ಇರುವುದರಿಂದ ಮತ್ತು ಸಂಶಯ ಮೂಡಿದ್ದರಿಂದ ಮುಂದಿನ ವಿಚಾರಣೆಗೆ ಒಳಪಡಿಸಿದೆವು. ಅಲ್ಲದೇ ಅವರ ಜೇಬಿನಲ್ಲಿದ್ದ ಕಾಗದ ಪತ್ರಗಳನ್ನು ತೆಗೆದು ತೋರಿಸು ಎಂದು ಕೇಳಲಾಗಿ ನಾಗಪ್ಪ ಎಂಬುವನು ತನ್ನ ಜೇಬಿನಲ್ಲಿದ್ದ ಕಾಗದ ಪತ್ರಗಳನ್ನು ಹಾಜರು ಪಡಿಸಿದನು. ಆ ಪತ್ರಗಳನ್ನು ಪರಿಶೀಲಿಸಲಾಗಿ ಬಿಜಾಪುರದಿಂದ ಹೊಸಪೇಟೆಯ ಕೆ.ಎಂ. ನಾಗಾರಾಜ ಇವರಿಗೆ ಮೂರು ಬಾರಿ ಫೋನಿನಲ್ಲಿ ಸಂಭಾಷಿಸಿದ್ದು, ಈ ಬಗ್ಗೆ ಎಸ್‌ಟಿಡಿ ಭೂತ್‌ನ ಬಿಲ್ಲಿನಿಂದ ತಿಳಿದು ಬಂದಿತು. ಈ ಹಿಂದೆ ಈ ಇಬ್ಬರು ವ್ಯಕ್ತಿಗಳು ಅವರಿಗೆ ಬಿಜಾಪುರದಲ್ಲಿ ಕೆಲಸವಿರುವುದಾಗಿ ತಿಳಿಸಿದ್ದು ಝಳಕಿ ಕಡೆಗೆ ಏಕೆ ಹೋಗಿದ್ದಿರಿ? ಎಂದು ಪ್ರಶ್ನಿಸಿದಾಗ ಸಮರ್ಪಕವಾದ ಉತ್ತರ ನೀಡಲಿಲ್ಲ. ಇದರಿಂದ ಆ ವ್ಯಕ್ತಿಗಳ ಮೇಲೆ ಸಂಶಯ ಬಲವಾಗಿ ಕಂಡುಬಂದಿತ್ತು. ಮತ್ತಷ್ಟು ವಿಚಾರಣೆಗೆ ಒಳಪಡಿಸಿದಾಗ ನಾಗಪ್ಪ ಎಂಬುವನು ಝಳಕಿ ಕಡೆಯಿಂದ ಹೆಚ್‌ಆರ್-38-ಬಿಜಿ-3390 ನಂಬರಿನ ಗ್ಯಾಸ್ ಟ್ಯಾಂಕರಿನಲ್ಲಿ ಮದ್ಯದ ಸರಕು ಬರುತ್ತದೆ. ಆದ್ದರಿಂದ ಆ ವಾಹನಕ್ಕೆ ಅವರು ಮುಂಗಾವಲಾಗಿ ಕೆಲಸ ನಿರ್ವಹಿಸಿ ಯಾವುದೇ ಅಬಕಾರಿ-ವ- ಪೊಲೀಸ್ ಅಧಿಕಾರಿಗಳು ರಸ್ತೆಯಲ್ಲಿ ಕಾವಲು ನಡೆಸುವ ಸಮಯವನ್ನು ಮುಂದಾಗಿ ತಿಳಿದು ಅಧಿಕಾರಿಗಳು ಇಲ್ಲದ ಸಮಯದಲ್ಲಿ ವಾಹನವನ್ನು ಕ್ಷೇಮವಾಗಿ ಕರೆದುಕೊಂಡು ಬರುವಂತೆ ಕೆ.ಎಂ. ನಾಗರಾಜರವರು ತಮಗೆ ತಿಳಿಸಿರುತ್ತಾರೆ ಎಂದು ವಿವರಿಸಿದನು. ಈ ವಿವರಣೆಯನ್ನು ಅದೇ ಸಮಯದಲ್ಲಿ ರಸ್ತೆಯ ಮೇಲೆ ರೆಕಾರ್ಡು ಮಾಡಲು ಸಾಧ್ಯವಾಗದ ಕಾರಣ ಈತನ ಹೇಳಿಕೆಯನ್ನು ಆ ಕ್ಷಣದಲ್ಲಿ ಬರೆಯಲಿಲ್ಲ. ಈ ಸಮಯಕ್ಕೆ ಝಳಕಿ ಕಡೆಯಿಂದ ಮೇಲೆ ಹೇಳಿದ ಗ್ಯಾಸ ಟ್ಯಾಂಕರ್ ವಾಹನ ಬರುತ್ತಿರುವುದು ಟಾಟಾ ಇಂಡಿಕಾ ಕಾರನ್ನು ಅದರಲ್ಲಿದ್ದ ವ್ಯಕ್ತಿಗಳು ಸಮವಸ್ತ್ರದಲ್ಲಿದ್ದ ಅಧಿಕಾರಿಗಳನ್ನು ನೋಡಿ ರಸ್ತೆಯ ಬದಿಗೆ ಅಂದರೆ ಟಾಟಾ ಇಂಡಿಕಾ ಕಾರಿನ ತುಸು ಹಿಂಬದಿಗೆ ಗ್ಯಾಸ್ ಟ್ಯಾಂಕರ್ ನಿಲ್ಲಿಸಿ, ಗ್ಯಾಸ ಟ್ಯಾಂಕರಿನ ವಾಹನ ಚಾಲಕನು ರಸ್ತೆಯ ಪಶ್ಚಿಮ ದಿಕ್ಕಿಗೆ ಓಡ ತೊಡಗಿದನು. ಆತನನ್ನು ಹಿಂಬಾಲಿಸುತ್ತಿರುವಂತೆಯೇ ವಾಹನದ ಮತ್ತೊಂದು ಬದಿಯಿಂದ ಮತ್ತೊಬ್ಬ ವ್ಯಕ್ತಿ ಇಳಿದು ರಸ್ತೆಯ ಪೂರ್ವ ದಿಕ್ಕಿಗೆ ಓಡತೊಡಗಿದನು. ಈ ಇಬ್ಬರು ವ್ಯಕ್ತಿಗಳನ್ನು ವಿರುದ್ಧ ದಿಕ್ಕಿನಲ್ಲಿ ಬೆನ್ನತ್ತಿ ಹಿಡಿಯಲು ಪ್ರಯತ್ನಿಸಿದಾಗ ವಾಹನ ಚಾಲಕನು ಕೈಗೆ ಸಿಗದೆ ತಪ್ಪಿಸಿಕೊಂಡು ಓಡಿಹೋದನು. ಮತ್ತೊಬ್ಬ ವ್ಯಕ್ತಿಯನ್ನು ಸುಮಾರು ಅರ್ಧ ಕಿಲೋಮೀಟರ್ ಬೆನ್ನತ್ತಿ ಹಿಡಿಯುವಲ್ಲಿ ಸಫಲರಾದರು. ಹಿಡಿದ ವ್ಯಕ್ತಿಯನ್ನು ಅವನ ಹೆಸರು ಮತ್ತು ವಿಳಾಸವನ್ನು ವಿಚಾರಿಸಲಾಗಿ ತನ್ನ ಹೆಸರು ರಾಜೇಶ (ರಮೇಶ) ಅಂತಲೂ ತಾನು ರಾಜಾಸ್ಥಾನನಂತಲೂ ಮತ್ತು ತಪ್ಪಿಸಿಕೊಂಡು ಹೋದ ವ್ಯಕ್ತಿ ವಾಹನ ಚಾಲಕನಾಗಿದ್ದು, ಅವನ ಹೆಸರು ಮುಬಾರಕ್ ಎಂತಲೂ ಆತನು ಇಂಧೋರಿನ ವಾಸಿಯಾಗಿದ್ದು ಆತನ ನಿಖರವಾದ ವಿಳಾಸ ತನಗೆ ಗೊತ್ತಿಲ್ಲವೆಂತಲೂ ತಿಳಿಸಿದನು. ನೀವು ಏಕೆ ಓಡಿಹೋದಿರಿ? ಎಂದು ವಿಚಾರಿಸಲಾಗಿ ಈ ಗ್ಯಾಸ್ ಟ್ಯಾಂಕರಿನಲ್ಲಿ ಮದ್ಯದ ಸರಕು ತುಂಬಿರುವುದಾಗಿಯೂ ಆ ಮದ್ಯದ ಸಾಗಾಣಿಕೆಗೆ ತಮ್ಮ ಬಳಿ ಯಾವುದೇ ದಾಖಲಾತಿಗಳು-ವ- ರಹದಾರಿ ಪತ್ರಗಳು ಇಲ್ಲವೆಂದು ಹಿಂದಿ ಭಾಷೆಯಲ್ಲಿ ತಿಳಿಸಿದನು. ಯಾವುದೇ ದಾಖಲಾತಿಗಳು ಇಲ್ಲದೆ ಸರಕನ್ನು ಹೇಗೆ ಸಾಗಿಸುತ್ತೀರಿವಿರಿ ಎಂದು ವಿಚಾರಿಸಲಾಗಿ ಗ್ಯಾಸ್ ಸಾಗಾಣಿಕೆಗಾಗಿ ಪಡೆಯಲಾದ ಕೆಲವು ಕಾಗದ ಪತ್ರಗಳು ವಾಹನದ ಕ್ಯಾಬಿನಲ್ಲಿನ ಇರುವುದಾಗಿ ತಿಳಿಸಿದರು. ವಾಹನದ ಕ್ಯಾಬಿನ ಹತ್ತಿ ಹುಡುಕಲಾಗಿ ವಾಹನದ ನೋಂದಣಿ ಸರ್ಟಿಫಿಕೇಟ್ (ನಕಲು) ಮತ್ತು ಗ್ಯಾಸ್ ಸಾಗಾಣಿಕೆಗೆ ಇಟ್ಟುಕೊಂಡಿದ್ದ ಕೆಲವು ಕಾಗದ ಪತ್ರಗಳು ದೊರೆತವು. ಸದರಿ ವಾಹನದ ಸರ್ಟಿಫಿಕೇಟ್ ಪರಿಶೀಲಿಸಿ ನೋಡಲಾಗಿ ಚಾಸ್ಸಿ ನಂ.361041 ಕೆಟಿಕ್ಯೂ 737418 ಇಂಜಿನ್ ನಂಬರ್ 697702 ಕೆಟಿಕ್ಯೂ 820961 ಇದನ್ನು ವಾಹನದ ಚಾಸ್ಸಿ ಮೇಲೆ ನಂಬರ್ 415005 ಜಿಝಡ್‌ಝಡ್ 205076 ಮತ್ತು ಇಂಜಿನ್ ನಂ.8104012 ಇದ್ದದ್ದು ಕಂಡುಬಂದಿತ್ತು. ಎರಡನ್ನು ಹೋಲಿಸಿ ನೋಡಲಾಗಿ ವ್ಯತ್ಯಾಸ ಕಂಡು ಬಂದಿರುತ್ತದೆ. ಇದರಿಂದ ಸಂಶಯ ಮತ್ತಷ್ಟು ಬಲವಾಗಿ ಕಾರಿನಲ್ಲಿ ಕುಳಿತಿದ್ದ ನಾಗಪ್ಪ ಮತ್ತು ಅಮರಯ್ಯ ಇವರನ್ನು ವಿಚಾರಿಸಲಾಗಿ ನಾಗಪ್ಪ ಎಂಬುವನು ತನಗೆ ಕೆ.ಎಂ. ನಾಗರಾಜರವರು ತಿಳಿಸಿದ ವಾಹನ ಇದೇ ಆಗಿದ್ದು, ಇದರಲ್ಲಿ ಗ್ಯಾಸ ಬದಲಾಗಿ ಮದ್ಯದ ಪೆಟ್ಟಿಗೆಗಳನ್ನು ತುಂಬಿರುವುದಾಗಿ ತಿಳಿಸಿದನು, ಎಷ್ಟು ಮದ್ಯದ ಪೆಟ್ಟಿಗೆಗಳು ತುಂಬಿವೆ? ಎಂದು ಕೇಳಲು ಅವನಿಗೆ ನಿಖರವಾಗಿ ತಿಳಿಯದುವೆಂತಲೂ ಮತ್ತು ಅಂದಾಜು 800 ಪೆಟ್ಟಿಗೆ ಮದ್ಯ ಇರುವುದೆಂತಲೂ ತಿಳಿಸಿದನು. ಈ ಮದ್ಯದ ಪೆಟ್ಟಿಗೆಗಳನ್ನು ಗ್ಯಾಸ್ ಟ್ಯಾಂಕಿನಲ್ಲಿ ಒಳಗೆ ಹೇಗೆ ಶೇಖರಿಸಿ ಇಡಲಾಯಿತು ಮತ್ತು ಅವುಗಳನ್ನು ಹೊರ ತೆಗೆಯುವ ಬಗೆ ಹೇಗೆ ಎಂದು ವಿಚಾರಿಸಲಾಗಿ ಅವನು ಗ್ಯಾಸ್ ಟ್ಯಾಂಕರಿನ ಹಿಂಬದಿಗೆ ಒಬ್ಬ ಮನುಷ್ಯ ತೂರಿಹೋಗುವಷ್ಟು ಖಿಂಡಿ ಇದ್ದು ಅದನ್ನು ಬೋಲ್ಟ್ -ವ- ನಟ್ಟಿನ ಸಹಾಯದಿಂದ ಮುಚ್ಚಲಾಗಿದೆ. ಮತ್ತು ಮದ್ಯದ ಪೆಟ್ಟಿಗೆಗಳನ್ನು ಈ ಖಿಂಡಿಯ ಮೂಲಕವೇ ಹೊರತೆಗೆಯಬೇಕಾಗಿದೆ ಎಂದು ತಿಳಿಸಿದನು. ಆ ಸಮಯಕ್ಕೆ ಸಂಜೆ 6.00 ಗಂಟೆ ಆಗಿದ್ದು ಹಿಂದಿನ ನಟ್ಟುಗಳನ್ನು ತೆಗೆಯಲು ಬೇಕಾದ ಸ್ಪಾನರ್ ಲಭ್ಯವಿಲ್ಲದ ಕಾರಣ ಮತ್ತು ಕತ್ತಲೆಯಾಗುತ್ತಿರುವ ಕಾರಣ ಟ್ಯಾಂಕರಿನ ಒಳಗಡೆ ಇರುವ ಮದ್ಯದ ಪೆಟ್ಟಿಗೆಗಳನ್ನು ಹೊರ ತೆಗೆಯಲು ಸಮಯ, ಬೆಳಕು, ಕೂಲಿ ಆಳುಗಳು ಅವಶ್ಯಕತೆ ಇದ್ದ ಕಾರಣ ಹಾಗೂ ವಾಹನ ನಿಲ್ಲಿಸಿದ ಸ್ಥಳದಲ್ಲಿ ಸುತ್ತಮುತ್ತ ಯಾವುದೇ ಜನವಸತಿ ಇಲ್ಲದೇ ಇದ್ದ ಕಾರಣ ಎರಡು ವಾಹನಗಳನ್ನು ವಶಕ್ಕೆ ತೆಗೆದುಕೊಂಡು ಮೂರು ವ್ಯಕ್ತಿಗಳನ್ನು ವಶಕ್ಕೆ ತೆಗೆದುಕೊಂಡು ಸ್ಥಳದಲ್ಲಿ ಪಂಚನಾಮೆ ಬರೆಯಲು ಬೆಳಕಿನ ಅಭಾವವಿದ್ದಕಾರಣ, ಬಿಜಾಪುರ ಅಬಕಾರಿ ಉಪ ಅಧೀಕ್ಷಕರ ಕಛೇರಿ ಉಪವಿಭಾಗ ಬಿಜಾಪುರ ಇವರ ಕಛೇರಿಯ ಆವರಣಕ್ಕೆ ತೆಗೆದುಕೊಂಡು ಬಂದರು. ಆಗ ಸಮಯ ರಾತ್ರಿ 8.00 ಗಂಟೆ ಆಗಿತ್ತು. ಸದರಿ ಟ್ಯಾಂಕರಿನ ಪಂಚನಾಮೆ ಸಲುವಾಗಿ ಕೆಲವು ಜನರನ್ನು ಪಂಚರಾಗಿ ಸ್ಥಳ ಪಂಚನಾಮೆ ಮಾಡಿಕೊಡಲು ಕೇಳಿಕೊಂಡರು ಯಾರು ಮುಂದೆ ಬರಲಿಲ್ಲ. ಆದ್ದರಿಂದ ಹಾಜರಿದ್ದ ಅಬಕಾರಿ ಅಧಿಕಾರಿಗಳನ್ನು ಸರ್ಕಾರಿ ಪಂಚರೆಂದು ನೇಮಕ ಮಾಡಿ

ಸದರಿ ಟ್ಯಾಂಕರಿನ ಮುಂದಿನ ತನಿಖೆಯನ್ನು ಕೈಗೊಳ್ಳಲಾಯಿತು. ಸದರಿ ಟ್ಯಾಂಕರಿನ ಹಿಂದಿನ ಪ್ಲೇಟಿಗೆ ಬಿಗಿದ ನಟ್‌ಗಳನ್ನು ಸ್ಪ್ಯಾನರ್ ಸಹಾಯದಿಂದ ಬಿಚ್ಚಿಸಿ ಒಳಗಡೆ ಟಾರ್ಚ್ ಬೆಳಕಿನಿಂದ ನೋಡಲಾಗಿ ಒಳಗಡೆ ಮದ್ಯದ ಪೆಟ್ಟಿಗೆಗಳನ್ನು ತುಂಬಿರುವುದು ಕಂಡುಬಂದಿತು. ಅಲ್ಲದೆ ಕೆಲವು ಮದ್ಯದ ಪೆಟ್ಟಿಗೆಗಳಲ್ಲಿನ ಮದ್ಯದ ಬಾಟಲಿಗಳು ಒಡೆದು ಮದ್ಯ ಸೋರಿ ತಡೆಯಲಾರದಷ್ಟು ಘಾಟವಾದ ವಾಸನೆ ಬರುತ್ತಿತ್ತು. ಖಿಂಡಿಯ ಒಳಗಡೆ ತಲೆಹಾಕಿ ನೋಡಲಾಗಿ ಉಸಿರು ಕಟ್ಟುವಂತಿತ್ತು. ಆ ಪರಿಸ್ಥಿತಿಯಲ್ಲಿ ಸಿಬ್ಬಂದಿಯನ್ನು ವಾಹನದ ಮತ್ತು ಆರೋಪಿತರ ಕಾವಲಿಗೆ ನೇಮಿಸಿ, ಮದ್ಯದ ಪೆಟ್ಟಿಗೆಗಳನ್ನು ಇಳಿಸುವ ಸಲುವಾಗಿ ಬೇಕಾಗಿದ್ದ ಕೂಲಿ ಆಳುಗಳನ್ನು ಹುಡುಕಿಕೊಂಡು ಹೋದರು. ದೊರೆತ ಕೆಲವು ಕೂಲಿ ಆಳುಗಳು ಆ ಕತ್ತಲಲ್ಲಿ ಟ್ಯಾಂಕರ್ ಒಳಗಡೆ ಸಾಕಷ್ಟು ಬೆಳಕು ಇಲ್ಲದೇ ಇರುವುದರಿಂದ ಮತ್ತು ಗಾಳಿಯ ಅಭಾವ ಇದ್ದು ಉಸಿರು ಕಟ್ಟುವ ಪರಿಸ್ಥಿತಿ ಇದ್ದುದರಿಂದ ಈಗ ಕೆಲಸ ಮಾಡುವುದು ಸಾಧ್ಯವಿಲ್ಲ ಎಂದು ತಿಳಿಸಿದರು. ಆದ್ದರಿಂದ ದಿನಾಂಕ: 02.01.2004ರ ಬೆಳಿಗ್ಗೆ 7.00 ಗಂಟೆಗೆ ಟ್ಯಾಂಕರಿನಲ್ಲಿದ್ದ ಮದ್ಯದ ಪೆಟ್ಟಿಗೆಗಳನ್ನು ಹೊರತೆಗೆಯುವ ಸಲುವಾಗಿ ಆಳುಗಳನ್ನು ನೇಮಿಸಿಕೊಳ್ಳಲಾಯಿತು. ಎಲ್ಲಾ ಮದ್ಯದ ಪೆಟ್ಟಿಗೆಗಳನ್ನು ಹೊರತೆಗೆಯಿಸಿ ಲೆಕ್ಕಮಾಡಿ ನೋಡಲಾಗಿ ಈ ಕೆಳಗಿನಂತೆ ಕಂಡುಬಂದವು.

1. ಓರಿಜಿನಲ್ ಚಾಯಿಸ್ ವಿಸ್ಕಿ ಲೇಬಲ್ ಹೊಂದಿದ 180ಎಂಎಲ್‌ನ ತುಂಬಿದ 465 ಮದ್ಯದ ಪೆಟ್ಟಿಗೆಗಳು ಇದ್ದುವು.

2. ಓಲ್ಡ್ ಮಂಕ್ ತ್ರಿಬಲ್ ಎಕ್ಸ್ ರಮ್ ಲೇಬಲ್ ಹೊಂದಿದ 180 ಎಂಎಲ್‌ದ ತುಂಬಿದ 410 ಮದ್ಯದ ಪೆಟ್ಟಿಗೆಗಳು ಇದ್ದವು.

ಈ ಮೇಲಿನ ಎಲ್ಲಾ ಮದ್ಯದ ಪೆಟ್ಟಿಗೆಗಳಲ್ಲಿ ಪ್ರತಿಯೊಂದರಲ್ಲಿ 180 ಎಂಎಲ್‌ನ 48 ಬಾಟಲ್‌ಗಳಿರುತ್ತವೆ. ಎರಡು ಜಾತಿಯ ಮದ್ಯದ ಪೆಟ್ಟಿಗೆಗಳನ್ನು ಕೂಡಿಸಿ ನೋಡಿದಾಗ ಒಟ್ಟು 875 ಮದ್ಯದ ಪೆಟ್ಟಿಗೆಗಳು ಇದ್ದು, ಈ 875 ಮದ್ಯದ ಪೆಟ್ಟಿಗೆಗಳಲ್ಲಿ ತುಂಬಿದ ಮದ್ಯವು 7560-00 ಲೀಟರ್ ಆಗುತ್ತದೆ. ಓರಿಜಿನಲ್ ಚಾಯ್ಸ್ ವಿಸ್ಕಿ ಬಾಟಲಿಗಳ ಮದ್ಯದ ಪೆಟ್ಟಿಗೆಗೆ 1-ರಿಂದ 465 ರವರೆಗೆ ಕ್ರಮ ಸಂಖ್ಯೆ ಬರೆಯಲಾಗಿದೆ. ಅದೇ ರೀತಿಯ ಓಲ್ಡ್ ಮಂಕ್ ತ್ರಿಬಲ್ ಎಕ್ಸ್ ರಮ್ ಮದ್ಯದ ಪೆಟ್ಟಿಗೆಗಳಿಗೆ 1- ರಿಂದ 410 ರ ವರೆಗೆ ಕ್ರಮಸಂಖ್ಯೆ ಬರೆಯಲಾಗಿದೆ. ಈ ಪೈಕಿ ಓರಿಜಿನಲ್ ಚಾಯ್ಸ್ ಬಾಟಲ್‌ಗಳ ಮದ್ಯದ ಪೆಟ್ಟಿಗೆಗಳ ಕ್ರಮ ಸಂಖ್ಯೆ 1-20-50-100-200-315-325-350-400 ಈ ಪೆಟ್ಟಿಗೆಗಳಿಂದ ಪ್ರತಿಯೊಂದರಿಂದ 3 ಬಟಲಿಗಳಂತೆ ಒಟ್ಟು 30 ಬಾಟಲ್‌ಗಳನ್ನು ಹಾಗೂ ಓಲ್ಡ್ ಮಂಕ್ ತ್ರಿಬಲ್ ಎಕ್ಸ್ ರಮ್ ಮದ್ಯದ ಪೆಟ್ಟಿಗೆಗಳ ಕ್ರಮಸಂಖ್ಯೆ: 1-25-50-100-150-200-250-300-400-410 ಹೀಗೆ ಒಟ್ಟು 10 ಮದ್ಯದ ಪೆಟ್ಟಿಗೆಗಳಿಂದ ಪ್ರತಿಯೊಂದರಿಂದ 3 ಬಾಟಲ್‌ಗಳಂತೆ 30 ಬಾಟಲ್‌ಗಳನ್ನು ಎರಡು ಬ್ರಾಂಡಿನಿಂದ ಒಟ್ಟು 60 ಬಾಟಲ್‌ಗಳನ್ನು ಮಾದರಿಯಾಗಿ ರಸಾಯನಿಕ ಪರೀಕ್ಷೆಗೆ ಪ್ರತ್ಯೇಕವಾಗಿ ತೆಗೆದು ಅವುಗಳ ಬಾಯಿಗೆ ಅರಿವೆಯಿಂದ ಸುತ್ತಿ ದಾರದಿಂದ ಕಟ್ಟಿ ಕಛೇರಿ ಶೀಲಿನಿಂದ ಶೀಲು ಮಾಡಿ ಪಂಚರ ಸಹಿ ಮತ್ತು ಅಧಿಕಾರಿಗಳ ಸಹಿ ಮಾಡಿದ ಚೀಟಿಗಳನ್ನು ಅಂಟಿಸಲಾಯಿತು. ಅಲ್ಲದೇ ಮೇಲೆ ಹೇಳಿದ ಎರಡು ವಾಹನಗಳನ್ನು ಜಪ್ತು ಮಾಡಿ ಮೇಲೆ ಹೇಳಿದ ಮೂರು (3) ಜನ ವ್ಯಕ್ತಿಗಳನ್ನು ಪಂಚರ ಸಮಕ್ಷಮ ದಸ್ತಗಿರಿ ಮಾಡಲಾಯಿತು. ಮತ್ತು ಮೇಲೆ ಹೇಳಿದ ಎಲ್ಲಾ ಮದ್ಯವನ್ನು ಈ ಕೇಸಿನ ಮುಂದಿನ ಪುರಾವೆ ಕುರಿತು ಜಪ್ತು ಮಾಡಲಾಯಿತು. ಪಂಚನಾಮೆಯನ್ನು ಸರ್ಕಾರಿ ಪಂಚರ ಸಮಕ್ಷಮ ದಿನಾಂಕ: 02.01.2004 ರಂದು ಬೆಳಿಗ್ಗೆ 7.00 ರಿಂದ ಪ್ರಾರಂಭಿಸಿ ಮಧ್ಯಾಹ್ನ 2.00 ಗಂಟೆವರೆಗೆ ಬರೆದು ಮುಗಿಸಿದರು. ನಂತರ ಪ್ರಥಮ ವರದಿ ನಂ.33/2003-04ನ್ನು ತಯಾರಿಸಿ ಆರೋಪಿತರನ್ನು ನ್ಯಾಯಾಲಯಕ್ಕೆ ಹಾಜರು ಪಡಿಸಿದರು. ನಂತರ ಆರೋಪಿತನಾದ ನಾಗಪ್ಪಾ ಭೀಮಪ್ಪ ಜುಮನಾಳ ಇವನನ್ನು ದಿನಾಂಕ: 06.01.2004 ರಂದು ನ್ಯಾಯಾಲಯದಿಂದ ತನಿಖಾಧಿಕಾರಿಗಳು ತಮ್ಮ ತಾಬಾಕ್ಕೆ ತೆಗೆದುಕೊಂಡು, ಅವನ ಹೇಳಿಕೆಯ ಮೇರೆಗೆ ಗೋವಾ ರಾಜ್ಯದ ಮೋಲಿಯಂಕ್ಕೆ ಕರೆದುಕೊಂಡು ಹೋಗಿ, ದಿನಾಂಕ: 07.01.2004 ರಂದು ಕೋಲಿಯಂಕ್ಕೆ ಹೋಗಿ ಅಲ್ಲಿಯ ಕುಳೆ, ಪೊಲೀಸ್ ಸ್ಟೇಷನ್‌ನಲ್ಲಿ ಪೊಲೀಸ್ ಇನ್ಸ್‌ಪೆಕ್ಟರ್ ರವರ ನೆರವನ್ನು ಪಡೆದು ಸುತೋಲಿಯಂದಲ್ಲಿರುವ ಮೇ: ಟ್ರೇತಾ ಕ್ವೀನ್ಸ್ ಎಂಬ ಡಿಸ್ಟೀಲರಿಗೆ ಹೋಗಿ ಈ ಕೇಸಿಗೆ ಸಂಬಂಧಪಟ್ಟಂತಹ ಲೇಬಲ್‌ಗಳು, ಬೂಚ ಮತ್ತು ಕಾರ್ಕ್ ಇವುಗಳನ್ನು ಹುಡುಕಲಾಯಿತು. ಯಾವುದು ವಸ್ತುಗಳು ಸಿಗಲಿಲ್ಲ. ದಿನಾಂಕ: 08.01.2004ರಂದು ವಾಪಸ್ಸು ಬಿಜಾಪುರಕ್ಕೆ ಬಂದು ಸದರಿ ಆರೋಪಿ ನಾಗಪ್ಪ ಭೀಮಪ್ಪ ಜುಮನಾಳ ಇವನನ್ನು ನ್ಯಾಯಾಲಯದ ವಶಕ್ಕೆ ಒಪ್ಪಿಸಲಾಯಿತು. ನಂತರ ಈ ಪ್ರಕರಣವನ್ನು ಮುಂದಿನ ಸೂಕ್ತ ಕ್ರಮಕ್ಕಾಗಿ ಅಬಕಾರಿ ಉಪ ನಿರೀಕ್ಷಕರು ಬಿಜಾಪುರ ಉಪ ವಲಯ ಇವರಿಗೆ ಮುದ್ದೇಮಾಲು ಸಮೇತ ಸಂಬಂಧಪಟ್ಟ ಕಾಗದ ಪತ್ರದೊಂದಿಗೆ ಹಸ್ತಾಂತರ ಮಾಡಿರುತ್ತಾರೆ.

ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಪ್ರಥಮ ವರ್ತಮಾನ ವರದಿ ಮತ್ತು ಪಂಚನಾಮೆ ಪ್ರತಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಮತ್ತು ಅಬಕಾರಿ ಉಪ ನಿರೀಕ್ಷಕರು ಬಿಜಾಪುರ ಉಪವಲಯ ಇವರು ರಸಾಯನಿಕ ಮಾದರಿಗಳನ್ನು ರಸಾಯನಿಕ ತಜ್ಞರಿಗೆ ಪರೀಕ್ಷೆಗೋಸ್ಕರ ಕಳುಹಿಸಿ, ರಸಾಯನಿಕ ತಜ್ಞರ ವರದಿಯನ್ನು ಪಡೆದಿರುತ್ತಾರೆ. ಸದರಿ ರಸಾಯನ ತಜ್ಞರ ವರದಿ ಸಂಖ್ಯೆ: ಸಿಸಿಎಲ್ 606/ 2004ರಲ್ಲಿ ಜಪ್ತು ಮಾಡಿದ ಮದ್ಯದಲ್ಲಿ ಮದ್ಯಸಾರದ ಅಂಶ ಇದ್ದು ಸದರಿ ಮದ್ಯವು ಮಾನವ ಸೇವನೆಗೆ ಯೋಗ್ಯ ಇರುವುದಾಗಿ ದೃಢಪಡಿಸಿರುತ್ತಾರೆ. ಮತ್ತು ಈ ಪ್ರಾಧಿಕಾರವು ಸದರಿ ಪ್ರಕರಣದಲ್ಲಿ ಜಪ್ತಿಯಾದ, ಟ್ಯಾಂಕರು ಮತ್ತು ಟಾಟಾ ಇಂಡಿಕಾ ಕಾರು ಹಾಗೂ ಮದ್ಯದ ಪೆಟ್ಟಿಗೆಗಳ ಬಗ್ಗೆ ಮಾಲೀಕತ್ವವನ್ನು ನಿರೂಪಿಸಲು ಯಾರಿಗೆ ಸಂಬಂಧಿಸಿದೆಯೋ ಅಂಥವರಿಗೆ ಎಂದು ಕರ್ನಾಟಕ ರಾಜ್ಯ ಪತ್ರದ ಮೂಲಕ ದಿನಾಂಕ: 04.02.2004 ರಂದು ನೋಟೀಸ್ ಹೊರಡಿಸಲಾಯಿತು. ಸದರಿ ನೋಟೀಸು ದಿನಾಂಕ: 26.02.2004ರಂದು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಗೊಂಡಿರುತ್ತದೆ. ತದನಂತರ ಸದರಿ ವಾಹನಗಳ ಟ್ಯಾಂಕರ್ ನಂ.ಹೆಚ್‌ಆರ್:38: ಬಿಜಿ: 3390ರ ಮಾಲೀಕರ ಹೆಸರು ಮತ್ತು ವಿಳಾಸ ತಿಳಿದುಕೊಳ್ಳಲು, ಬಿ-ಎಕ್ಸ್‌ಟ್ರ್ಯಾಕ್ಟ್ ಪತ್ರ ಕಳುಹಿಸಲು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಫರಿದಾಬಾದ್ ಹರಿಯಾಣ ರಾಜ್ಯಕ್ಕೆ ಪತ್ರ ಬರೆಯಲಾಗಿರುತ್ತದೆ. ಆದರೆ ಸದರಿ ಅಧಿಕಾರಿಗಳಿಂದ ಯಾವುದೇ ಉತ್ತರ ಬಂದಿರುವುದಿಲ್ಲ. ಮತ್ತು ಟಾಟಾ ಇಂಡಿಕಾ ಕಾರು ಸಂಖ್ಯೆ: ಕೆಎ:03:ಝಡ್:705 ರ ಮಾಲೀಕರ ಹೆಸರು ಮತ್ತು ವಿಳಾಸ ಕುರಿತು ಬಿ-ಎಕ್ಸ್‌ಟ್ರ್ಯಾಕ್ಟ್ ಕಳುಹಿಸಲು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಕರ್ನಾಟಕ ರಾಜ್ಯ ಬೆಂಗಳೂರು (ಪಶ್ಚಿಮ) ಇಂದಿರಾನಗರ ಬೆಂಗಳೂರು ಇವರಿಗೆ ಪತ್ರ ಬರೆದು, ಸದರಿ ಸಾರಿಗೆ ಅಧಿಕಾರಿಗಳಿಂದ ಬಿ-ಎಕ್ಸ್‌ಟ್ರ್ಯಾಕ್ಟ್ ಪಡೆದುಕೊಂಡಿದ್ದು, ಸದರಿ ವರದಿಯಲ್ಲಿ ಟಾಟಾ ಇಂಡಿಕಾ ಕಾರು ಸಂಖ್ಯೆ: ಕೆಎ:03:ಝಡ್:705ರ ಮಾಲೀಕರ ಹೆಸರು ಶ್ರೀ ಶ್ರೀನಿವಾಸ ಕೆ.ಕೆ. ನಂ.37 ಈಡನ್ ರಾಕ್ ಯಲ್ಲಪ್ಪ ಚೆಟ್ಟಿ ಆಲಸೂರ ರೋಡ್, ಬೆಂಗಳೂರು-42 ಎಂದು ದೃಢಪಡಿಸಿರುತ್ತಾರೆ.

ತದನಂತರ ಕೆ.ಕೆ. ಶ್ರೀನಿವಾಸ ಬಿನ್: ಕೇಶವನ ಪ್ಲಾಟ್-ಬಿ, ಈಡನ್ ರಾಕ್ ಯಲ್ಲಪ್ಪ ಚಟ್ಟಿ ಲೇಔಟ್- ಆಲಸೂರು ರೋಡ್, ಬೆಂಗಳೂರು ಇವರ ಪರವಾಗಿ ಇವರ ಜಿ.ಪಿ.ಎ. ಧಾರಕರು ಈ ಪ್ರಕರಣದಲ್ಲಿ ಜಪ್ತು ಮಾಡಿದ ಟಾಟಾ ಇಂಡಿಕಾ ಕಾರು ನೋಂದಣಿ ಸಂಖ್ಯೆ: ಕೆಎ:03:ಝಡ್:705 ವಾಹನವನ್ನು ತಾತ್ಕಾಲಿಕವಾಗಿ ಬಿಡುಗಡೆ ಮಾಡುವ ಬಗ್ಗೆ ಅರ್ಜಿಯನ್ನು ವಕೀಲರೊಂದಿಗೆ ದಿನಾಂಕ: 23.02.2004 ರಂದು ಅರ್ಜಿ ಸಲ್ಲಿಸಿರುತ್ತಾರೆ. ಸದರಿ ಅರ್ಜಿಯ ಕುರಿತು ಸಹಾಯಕ ಸರ್ಕಾರಿ ಅಭಿಯೋಜಕ ನಿರ್ದೇಶಕರು ಬಿಜಾಪುರ ಇವರಿಗೆ ಸದರಿ ಪ್ರಕರಣದಲ್ಲಿ ಜಪ್ತಾದ ಟಾಟಾ ಇಂಡಿಕಾ ಕಾರನ್ನು ತಾತ್ಕಾಲಿಕ ಬಿಡುಗಡೆ ಮಾಡುವ ಕುರಿತು ಅಭಿಪ್ರಾಯ ಸಲ್ಲಿಸಲು ಕೋರಿ ಪತ್ರ ಬರೆಯಲಾಗಿರುತ್ತದೆ. ಸದರಿ ಎ.ಡಿ.ಪಿ.ರವರು ವಾಹನಗಳನ್ನು ತಾತ್ಕಾಲಿಕವಾಗಿ ಬಿಡುಗಡೆ ಮಾಡಬಾರದೆಂದು ಈ ಪ್ರಾಧಿಕಾರದ ಮುಂದೆ ತಕರಾರು ಮಾಡಿರುತ್ತಾರೆ. ಮತ್ತು ಸದರಿ ಕಾರನ್ನು ಬಿಡುಗಡೆ ಕುರಿತು ವಿಚಾರಣೆಯ ದಿನಾಂಕವನ್ನು ನಿಗದಿಪಡಿಸಿ ಸಂಬಂಧಿಸಿದ ವಾಹನ ಮಾಲೀಕರಿಗೆ ಮತ್ತು ಅವರ ಪರ ವಕೀಲರಿಗೆ ನೋಟೀಸ್ ನೀಡಲಾಯಿತು.

ಸದರಿ ಮೇಲ್ಕಾಣಿಸಿದ ವಾಹನಗಳು ಅಕ್ರಮವಾಗಿ ನಕಲಿ ಮದ್ಯ ಸಾಗಾಣಿಕೆ ಮಾಡುವುದರಲ್ಲಿ ತೊಡಗಿರುವುದರಿಂದ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಪ್ರಕಾರ ಜಪ್ತು ಮಾಡಿದ ವಾಹನ ಮತ್ತು ಮುದ್ದೇಮಾಲನ್ನು ನಿಯಮಗಳ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳು ಅವಕಾಶವಿರುತ್ತದೆ. ಆದ್ದರಿಂದ ದಿನಾಂಕ: 19.03.2004 ರಂದು ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು ಬಿಜಾಪುರ ಜಿಲ್ಲೆ, ಬಿಜಾಪುರ ಇವರ ಮುಟ್ಟುಗೋಲು ಆದೇಶ ಸಂಖ್ಯೆ:ಇಎಕ್ಸ್‌ಇ:ಬಿಜೆಪಿ:ಡಿಟಿಸಿಆರ್.111: 2003-04ರಲ್ಲಿ ಈ ಪ್ರಕರಣದಲ್ಲಿ ಜಪ್ತು ಮಾಡಿದ 875 ಮದ್ಯದ ಪೆಟ್ಟಿಗೆಗಳನ್ನು ಮಾತ್ರ ಮುಟ್ಟುಗೋಲು ಹಾಕಿಕೊಂಡು ಬಹಿರಂಗ ಹರಾಜು ಮೂಲಕ ಸನ್ನುದುದಾರರಿಗೆ ಮಾರಾಟ ಮಾಡಲು ಆದೇಶ ಹೊರಡಿಸಿರುತ್ತಾರೆ. ತದನಂತರ ಈ ಪ್ರಾಧಿಕಾರವು ಸದರಿ ವಾಹನದ ಪ್ರಕರಣದ ವಿಚಾರಣೆಯನ್ನು ದಿನಾಂಕಗಳನ್ನು ನಿಗದಿಪಡಿಸಿ ಸಂಬಂಧಿಸಿದವರಿಗೆ ನೋಟೀಸ್‌ಗಳನ್ನು ಹೊರಡಿಸಿರುತ್ತದೆ.

ದಿನಾಂಕ:26.10.2004 ರಂದು ವಿಚಾರಣೆ ವೇಳೆಯಲ್ಲಿ ಪ್ರಾಸಿಕ್ಯೂಶನ್ ಪರವಾಗಿ ಮೂರು (3) ಸಾಕ್ಷಿದಾರರ ಸಾಕ್ಷಿಗಳನ್ನು ಸಹಾಯಕ ಅಭಿಯೋಗ ನಿರ್ದೇಶಕರು ನುಡಿಸಿ, ನಿಶಾನೆ ಪಿ-1 ರಿಂದ ನಿಶಾನೆ ಪಿ-5 ಎಂದು ಮತ್ತು ಮುದ್ದೇಮಾಲನ್ನು 1, 2 ಹಾಗೂ 3 ಎಂದು ಗುರುತಿಸಿಕೊಳ್ಳಲಾಯಿತು. ವಾಹನ ಮಾಲೀಕರ ಪರವಾಗಿ ವಕೀಲರು ಹಾಜರು ಇದ್ದು ಪಾಟಿ ಸವಾಲು ಮಾಡಿರುತ್ತಾರೆ.

ಪ್ರಾಸಿಕ್ಯೂಷನ್ ಪರ ಸಾಕ್ಷಿ ಪ್ರಾ.ಸಾ-1 ಇವರ ತಮ್ಮ ಮುಖ್ಯ ವಿಚಾರಣೆಯಲ್ಲಿ ಸಾಕ್ಷಿ ನುಡಿಯುತ್ತಾ ತಾನು ದಿನಾಂಕ: 02.04.2001 ರಿಂದ ಅಬಕಾರಿ ಉಪ ನಿರೀಕ್ಷಕರೆಂದು ಬಿಜಾಪುರ ಉಪ ವಿಭಾಗದಲ್ಲಿ ಸೇವೆ ಸಲ್ಲಿಸುತ್ತಾ ಇದ್ದೇನೆ. ದಿನಾಂಕ: 02.01.2004ರಂದು ಅಬಕಾರಿ ಉಪ ಅಧೀಕ್ಷಕರು ಬೆಳಗಾಂವ ಉಪ ವಿಭಾಗ ಇವರು ನಮ್ಮ ಕಛೇರಿಗೆ ಹಾಜರಾಗಿ ಅಕ್ರಮವಾಗಿ ಭಾರತೀಯ ಮದ್ಯವನ್ನು ಸರ್ಕಾರಕ್ಕೆ ಕರ ಕೂಡದೇ ಗ್ಯಾಸ್ ಟ್ಯಾಂಕರಿನಲ್ಲಿ ತುಂಬಿಸಿ ಸಾಗಿಸುತ್ತಿದ್ದ ಅಪರಾಧ ವೆಸಗಿದ ಪ್ರಯುಕ್ತ ರಾಷ್ಟ್ರೀಯ ಹೆದ್ದಾರಿ-13 ಸೋಲ್ಲಾಪುರದಿಂದ ಬಿಜಾಪುರಕ್ಕೆ ಬರುವ ರಸ್ತೆಯ ಭೂತನಾಳ ಹಳ್ಳದ ಸೇತುವೆಯ ಹತ್ತಿರ ಅಪರಾಧ ವೆಸಗಿದ ಪ್ರಯುಕ್ತ ಟ್ಯಾಂಕರ್ ನಂಬರ್: ಹೆಚ್ಆರ್:38: ಬಿಜಿ: 3390, ಹಾಗೂ ಕೆಎ:03:ಝಡ್:705, ಇಂಡಿಕಾ ಕಾರು ಮತ್ತು 180 ಮಿಲಿಯ 48 ಬಾಟಲುಗಳುಳ್ಳ 465 ರಟ್ಟಿನ ಪೆಟ್ಟಿಗೆಗಳಲ್ಲಿದ್ದ ಓರಿಜಿನಲ್ ಚಾಯ್ಸ್ ವಿಸ್ಕಿ ಬಾಟಲಿಗಳು ಹಾಗೂ 180 ಮಿಲಿಯ 48 ಬಾಟಲ್‌ಗಳುಳ್ಳ 410 ರಟ್ಟಿನ ಪೆಟ್ಟಿಗೆಗಳಲ್ಲಿದ್ದ ಓಲ್ಡ್ ಮಂಕ್ ತ್ರಿಬಲ್‌ಎಕ್ಸ್ ರಮ್ ಇವುಗಳನ್ನು ನನ್ನ ತಾಬಾಕ್ಕೆ ಕೊಟ್ಟು ಹಾಗೂ 3 ಜನ ಆರೋಪಿತರನ್ನು ನನ್ನ ತಾಬಾಕ್ಕೆ ಒಪ್ಪಿಸಿದರು. ನಂತರ ಎಫ್.ಐ.ಆರ್. ನ್ನು ತಯಾರಿಸಿ ಅದನ್ನು ಸಂಬಂಧಪಟ್ಟ ನ್ಯಾಯ ದಂಡಾಧಿಕಾರಿಗಳಿಗೆ ಕಳುಹಿಸಿ ಕೊಟ್ಟೆ. ಸದರ ಎಫ್.ಐ.ಆರ್. ನಂ.33/ 2003-04 ಅಂತಾ ನೋಂದಾಯಿಸಿದ್ದು ಇತ್ತು. ಸದರಿ ಎಫ್.ಐ.ಆರ್. ದ ನಕಲು ಈಗ ನೋಡಿ ಅದನ್ನು ನಿಶಾನೆ-ಪಿ-1 ಮತ್ತು ಅದರ ಮೇಲಿನ ಸಹಿ ನಿಶಾನೆ ಪಿ-1(ಎ) ಎಂದು ಗುರುತಿಸಲಾಯಿತು. ಮಾಹಿತಿಗಾಗಿ ಸಂಬಂಧಿಸಿದ ಕಾಗದ ಪತ್ರಗಳನ್ನು ನನ್ನ ಮೇಲಾಧಿಕಾರಿಗಳಿಗೆ ಕಳುಹಿಸಿಕೊಟ್ಟೆ. ಅಬಕಾರಿ ಉಪ ಅಧೀಕ್ಷಕರು ಅಂದು ನನ್ನ ತಾಬಕ್ಕೆ ಕೊಟ್ಟ ಪಂಚನಾಮೆಯ ದೃಢೀಕೃತ ನಕಲನ್ನು ನೋಡುತ್ತಿದ್ದು ಅದನ್ನು ನಿಶಾನೆ ಪಿ-2 ಎಂದು ಗುರುತಿಸಲಾಯಿತು.

ಮೂರು ಆರೋಪಿತರನ್ನು ದಸ್ತಗಿರಿ ಮಾಡಿ ನ್ಯಾಯಾಲಯದ ಮುಂದೆ ಹಾಜರುಪಡಿಸಿದೆ. ಆರೋಪಿ ನಾಗಪ್ಪ ಭೀಮಪ್ಪ ಜುಮನಾಳ, ಇವನನ್ನು ದಿನಾಂಕ: 06.01.2004ರಂದು ನ್ಯಾಯಾಲಯದಿಂದ ನನ್ನ ತಾಬಾಕ್ಕೆ ತೆಗೆದುಕೊಂಡು, ಅವನ ಹೇಳಿಕೆಯ ಮೇರೆಗೆ ಗೋವಾ ರಾಜ್ಯದ ಮೋಲಿಯಂಕ್ಕೆ ಕರೆದುಕೊಂಡು ಹೋಗಿ, ದಿನಾಂಕ: 07.01.2004ರಂದು ಕೋಲಿಯಂಕ್ಕೆ ಹೋಗಿ ಅಲ್ಲಿಯ ಕುಳೆ, ಪೊಲೀಸ್ ಸ್ಟೇಶನ್‌ದಲ್ಲಿ ಪೊಲೀಸ್ ಇನ್ಸ್‌ಪೆಕ್ಟರ್ ರವರ ನೆರವನ್ನು ಪಡೆದು ಸುತೋಲಿಯಂದಲ್ಲಿರುವ ಮೇ: ಟ್ರೇಟಾ ಕ್ವೀನ್ಸ್ ಎಂಬ ಡಿಸ್ಟೀಲರಿಗೆ ಹೋಗಿ ಈ ಕೇಸಿಗೆ ಸಂಬಂಧಪಟ್ಟಂತಹ ಲೇಬಲ್‌ಗಳು, ಬೂಚ ಮತ್ತು ಕಾರ್ಕ್ ಇವುಗಳನ್ನು ಹುಡುಕಲಾಯಿತು. ಯಾವುದು ವಸ್ತುಗಳು ಸಿಗಲಿಲ್ಲ. ದಿನಾಂಕ: 08.01.2004ರಂದು ವಾಪಸ್ಸು ಬಿಜಾಪುರಕ್ಕೆ ಬಂದು ಸದರಿ ಆರೋಪಿ ನಾಗಪ್ಪ ಭೀಮಪ್ಪ ಜುಮನಾಳ ಇವನನ್ನು ನ್ಯಾಯಲಯದ ವಶಕ್ಕೆ ಒಪ್ಪಿಸಲಾಯಿತು. ಅಬಕಾರಿ ಉಪ ಅಧೀಕ್ಷಕರು ನನ್ನ ತಾಬಾಕ್ಕೆ ನೀಡಿದ ಎಲ್ಲಾ ವಸ್ತುಗಳನ್ನು ಅನುಬಂಧ ತಯಾರಿಸಿದೆ. ಅದರ ದೃಢೀಕೃತ ನಕಲನ್ನು ನಿಶಾನೆ ಪಿ-3 ಮತ್ತು ಅದರ ಮೇಲಿನ ಸಹಿಯನ್ನು ನಿಶಾನೆ ಪಿ-3(ಎ) ಎಂದು ಗುರುತಿಸಲಾಯಿತು. ಈ ಪ್ರಕರಣದ ಮುಂದಿನ ತನಿಖೆಗಾಗಿ ಶ್ರೀ ಎಂ.ಬಿ. ಹಳ್ಳದಮನಿ ಅಬಕಾರಿ ಉಪ ನಿರೀಕ್ಷಕರು ಇವರಿಗೆ ಕಡತವನ್ನು ವರ್ಗಾಯಿಸಿದೆ. ಈಗ ಟ್ಯಾಂಕರ್ ನೋಡುತ್ತಿದ್ದು ಅದನ್ನು ಮುದ್ದೇಮಾಲು-1, ಕಾರನ್ನು ನೋಡುತ್ತಿದ್ದು ಅದನ್ನು ಮುದ್ದೇಮಾಲು-2, ಮತ್ತು ಶ್ಯಾಂಪಲ್ ಬಾಟಲಿಗಳನ್ನು ಒಟ್ಟು 30 (ಓರಿಜಿನಲ್ ಚಾಯ್ಸ್ ವಿಸ್ಕಿ) ಎಂ.ಓ. -4 ಎಂದು ಗುರುತಿಸಲಾಯಿತು. 30 ಓಲ್ಡ್ ಮಂಕ್ ತ್ರಿಬಲ್ ಎಕ್ಸ್ ರಮ್ ಶ್ಯಾಂಪಲ್ ಬಾಟಲಿಗಳನ್ನು ಎಂ.ಓ. -4 ಎಂದು ಗುರುತಿಸಲಾಯಿತು ಎಂದು ಸಾಕ್ಷಿ ನುಡಿದಿರುತ್ತಾರೆ.

ಅರ್ಜಿದಾರರ ಪರ ವಕೀಲರು ಮಾಡಿದ ಪಾಟೀ ಸವಾಲುಗಳಿಗೆ ಉತ್ತರಿಸುತ್ತಾ ಈ ಪ್ರಕರಣದಲ್ಲಿ ಲಿಖಿತವಾದ ದೂರನ್ನು ಯಾರು ನೀಡಿಲ್ಲಾ. ಆರೋಪಿತರನ್ನು ದಾಖಲೆಗಳನ್ನು ಹಾಗೂ ಮುದ್ದೇಮಾಲಗಳನ್ನು ದಿನಾಂಕ: 02.01.2004ರಂದು ಮಧ್ಯಾಹ್ನ 2.00 ಗಂಟೆಗೆ ನನಗೆ ಒಪ್ಪಿಸಿದರು. ಈ ಎಲ್ಲಾ ದಾಖಲಾತಿ ಹಾಗೂ ಮುದ್ದೇಮಾಲನ್ನು ನನ್ನ ವಶಕ್ಕೆ ಕೊಡುವಾಗ ಶ್ರೀ ಟಿ.ಎಸ್. ಮೇತ್ರಿ. ಅಬಕಾರಿ ಉಪ ಅಧೀಕ್ಷಕರು ಮತ್ತು ಶ್ರೀ ಎನ್.ವೀರಭದ್ರಪ್ಪ, ಅಬಕಾರಿ ನಿರೀಕ್ಷಕರು ಇವರು ಹಾಜರ ಇದ್ದರು. ಇವರು ಅಲ್ಲದೇ ನಮ್ಮ ಜಂಟಿ ಆಯುಕ್ತರು (ಜಾರಿ ಮತ್ತು ತನಿಖೆ) ಬೆಳಗಾಂವ ರವರು ಕೂಡಾ ಹಾಜರ ಇದ್ದರು. ನಾನು ಅವರಿಗೆ ಯಾರಿಗೂ ಪಿರ್ಯಾದಿ ನೀಡುವಂತೆ ಕೇಳಿರುವುದಿಲ್ಲಾ. ಮಹಜರ್ ನಿಶಾನೆ ಪಿ-2ನ್ನು ನಮ್ಮ ಕಛೇರಿಯಲ್ಲಿ ಬರೆದಿರುತ್ತಾರೆ. ಆ ಕಾಲಕ್ಕೆ ನಾನು ಕಛೇರಿಯಲ್ಲಿ ಹಾಜರ್ ಇದ್ದೆ. ಟ್ಯಾಂಕರ್‌ನಿಂದ ಮದ್ಯದ ಬಾಟಲಿಗಳನ್ನು ಇಳಿಸಲು ಅಬಕಾರಿ ಉಪ ಅಧೀಕ್ಷಕರು ಬೇರೆ ಜನರನ್ನು ಕರೆಸಿದ್ದರು. ನಾಗಪ್ಪನ ಹೇಳಿಕೆ ನನ್ನ ಬಳಿ ಇರುತ್ತದೆ. ದಿನಾಂಕ: 02.01.2004 ರಂದು ಆರೋಪಿ ನನ್ನ ಮುಂದೆ ಹೇಳಿಕೆಯನ್ನು ನ್ಯಾಯಾಲಯಕ್ಕೆ ಹಾಜರಪಡಿಸಿದ್ದೇನೆ. ನ್ಯಾಯಾಲಯಕ್ಕೆ ಹಾಜರುಪಡಿಸಿದ ಬಗ್ಗೆ ಈ ಪ್ರಾಧಿಕಾರದ ಮುಂದೆ ಯಾವುದೇ ದಾಖಲಾತಿಯನ್ನು ಹಾಜರು ಮಾಡಿರುವುದಿಲ್ಲಾ. ಈ ಪ್ರಕರಣದಲ್ಲಿ ನನ್ನ ಪ್ರಕಾರ ಪಿರ್ಯಾಧಿದಾರರು ಅಬಕಾರಿ ಉಪ ಅಧೀಕ್ಷಕರು ಬೆಳಗಾಂವ ಉಪ ವಿಭಾಗ ಇವರು ಇರುತ್ತಾರೆ. ನಾನು ಸಾಕ್ಷಿದಾರರ ಹೇಳಿಕೆಯನ್ನು ಪಡೆದಿರುವುದಿಲ್ಲಾ. ನಾನು ಆರೋಪಿ ನಾಗಪ್ಪನನ್ನು ವಶಕ್ಕೆ ತೆಗೆದುಕೊಂಡ ನಂತರ ಗೋವಾಕ್ಕೆ ಹೋಗಿ ಮಾಡಿದ ತನಿಖೆಯ ಬಗ್ಗೆ ಯಾವುದೇ ಕಾಗದ ಪತ್ರಗಳನ್ನು ಈ ಪ್ರಾಧೀಕಾರದ ಮುಂದೆ ಹಾಜರ್ ಮಾಡಿರುವುದಿಲ್ಲಾ ಆರೋಪಿ ನಾಗಪ್ಪ ನನ್ನ ಮುಂದೆ ನೀಡಿದ ಹೇಳಿಕೆಯ ಪ್ರಕಾರ ಯಾವುದೇ ವಸ್ತು ತನಿಖೆಯ ಕಾಲದಲ್ಲಿ ನಮಗೆ ಸಿಕ್ಕಿರುವುದಿಲ್ಲ. ಕಾರಿನ ಮಾಲೀಕರಿಗೂ ಮತ್ತು ಟ್ಯಾಂಕರ್‌ನಲ್ಲಿ ಸಾಗಿಸುವ ಮದ್ಯಕ್ಕೂ ಸಂಬಂಧ ಇರುವುದು ಬಗ್ಗೆ ಯಾವುದೇ ಸಾಕ್ಷಿ ಸಂಗ್ರಹಿಸಿ ಈ ಪ್ರಾಧಿಕಾರಕ್ಕೆ ಹಾಜರುಪಡಿಸಿರುವುದಿಲ್ಲಾ. ನಾನು ಜಂಟಿ ಆಯುಕ್ತರು (ಜಾರಿ ಮತ್ತು ತನಿಖೆ) ಬೆಳಗಾಂವ್ ವಿಭಾಗ ಇವರ ಮಾತು ಕೇಳಿ ಸುಳ್ಳು ದಾಖಲಾತಿಗಳನ್ನು ಸೃಷ್ಟಿಸಿ ಈ ಪ್ರಾಧಿಕಾರದ ಮುಂದೆ ಸುಳ್ಳು ಪ್ರಕರಣವನ್ನು ದಾಖಲಿಸಿದ್ದೇನೆ ಎಂದರೆ ಸರಿಯಲ್ಲ ಎಂದು ಸಾಕ್ಷಿ ನುಡಿದಿರುತ್ತಾರೆ.

ದಿನಾಂಕ: 09.11.2004 ರಂದು ನಡೆಸಿದ ವಿಚಾರಣೆಯಲ್ಲಿ ಪ್ರಾ.ಸಾ. -2 ಇವರು ಸಾಕ್ಷಿ ನುಡಿಯುತ್ತಾ, ದಿನಾಂಕ: 31.12.2003 ರಂದು ನಾನು ನಮ್ಮ ಅಬಕಾರಿ ರಕ್ಷಕ ಎ.ವಿ. ರಾವಳ, ಇವರ ಜೊತೆಗೆ ಅಬಕಾರಿ ಉಪ ಅಧೀಕ್ಷಕರು ಬೆಳಗಾಂವ ಉಪ ವಿಭಾಗ ಇವರನ್ನು ಕಛೇರಿಯ ಕೆಲಸದ ನಿಮಿತ್ಯ ಅವರನ್ನು ಭೇಟಿಯಾಗಲು ಹೋಗಿದ್ದೆ. ಅವರು ಆ ಸಮಯದಲ್ಲಿ ಚಿಕ್ಕೋಡಿ ಉಪ ವಿಭಾಗದ ಪ್ರಭಾರ ಅಬಕಾರಿ ಉಪ ಅಧೀಕ್ಷಕರಾಗಿದ್ದರು.

ಅವರು ನಮ್ಮಿಬ್ಬರಿಗೂ ಖಚಿತವಾದ ಭಾತ್ಮಿ ಬಂದಿದೆ ನಮ್ಮೊಂದಿಗೆ ಅಬಕಾರಿ ದಾಳಿಗಾಗಿ ಬರಬೇಕು ಅಂತಾ ಹೇಳಿದರು. ಆ ಪ್ರಕಾರ ಜಂಟಿ ಆಯುಕ್ತರು ಉಪ ಅಧೀಕ್ಷಕರು ನಮ್ಮ ಗಾರ್ಡ್ಸ್ ಶ್ರೀರಾವಲ ಇವರೆಲ್ಲರೂ ಸೇರಿ ಜಂಟಿ ಆಯುಕ್ತರು ಕಾರಿನಲ್ಲಿ (ವಾಹನದಲ್ಲಿ) ಬಿಜಾಪುರ ಬೈಪಾಸ್ ರೋಡಿಗೆ ಬಂದೆವು. ಆಗ ಸಮಯ ಸಂಜೆ 5.00 ಗಂಟೆಯಾಗಿತ್ತು. ಅಲ್ಲಿ ಬಂದಾಗ ಜಂಟಿ ಆಯುಕ್ತರು ನಮಗೆ ಸೊಲ್ಲಾಪುರ ಕಡೆಯಿಂದ ರಾಷ್ಟ್ರೀಯ ಹೆದ್ದಾರಿ-13ರ ಮೇಲಿಂದ ಟಾಟಾ ಇಂಡಿಕಾ ಕಾರು ನಂ. ಕೆಎ:03:ಝಡ್:705 ಬೆಳ್ಳಿ ಬಣ್ಣದ ಕಾರು ಬರುತ್ತದೆ. ಅದರಲ್ಲಿ ಇಬ್ಬರು ವ್ಯಕ್ತಿಗಳು ಇರುತ್ತಾರೆ. ಆ ಕಾರನ್ನು ತಡೆದು ನಿಲ್ಲಿಸಿದರೆ ಅದರ ಹಿಂಬದಿಯಿಂದ ಕಳ್ಳ ಸಾಗಾಣಿಕೆಯಿಂದ ಸಾಗಾಟ ಮಾಡುತ್ತಿರುವ ಮದ್ಯ ತುಂಬಿದ ಗ್ಯಾಸ್ ಟ್ಯಾಂಕರನ್ನು ಹಿಡಿಯಬಹುದು. ಇದರ ನಂಬರ್ ಗೊತ್ತಿಲ್ಲ ಅಂತಾ ಹೇಳಿದರು. ಆ ಪ್ರಕಾರ ನಾವೆಲ್ಲರೂ ಭೂತನಾಳ ಹಳ್ಳದ ಕೆರೆಯ ಹತ್ತಿರ ವಾಚ್ ಮಾಡುತ್ತಾ ನಿಂತೆವು. ಈ ರೀತಿ ವಾಚ್ ಮಾಡುತ್ತಾ ನಿಂತಾಗ ದಿನಾಂಕ: 01.01.2004ರಂದು ಮಧ್ಯಾಹ್ನ 4.00 ಗಂಟೆ ಸುಮಾರಿಗೆ ಸೋಲ್ಲಾಪುರದ ಕಡೆಯಿಂದ ವಿವರಿಸಿದ ಟಾಟಾ ಇಂಡಿಕಾ ಕಾರು ಬರುವುದನ್ನು ನೋಡಿದೆವು ಅದನ್ನು ಅಡ್ಡಗಟ್ಟಿ ತಡೆದು ನಿಲ್ಲಿಸಿದೆವು. ಆ ಕಾರಿನಲ್ಲಿ ಇಬ್ಬರು ವ್ಯಕ್ತಿಗಳು ಕುಳಿತಿದ್ದರು. ಅವರ ಹೆಸರು ಮತ್ತು ವಿಳಾಸವನ್ನು ವಿಚಾರಿಸಲಾಗಿ, ಆ ಕಾರು ಚಾಲನೆ ಮಾಡುತ್ತಿದ್ದ ವ್ಯಕ್ತಿಯು ತನ್ನ ಹೆಸರು ಅಮರಯ್ಯ ಹಾಗೂ ತಾನು ಲಿಂಗಸೂರು ವಾಸಿ ಎಂದು ಹೇಳಿದ. ಇವರ ಪಕ್ಕಕ್ಕೆ ಕುಳಿತಿದ್ದ ವ್ಯಕ್ತಿಯ ಹೆಸರನ್ನು ಕೇಳಲಾಗಿ ಅವನು ತನ್ನ ಹೆಸರು ನಾಗಪ್ಪಾ ಹೊಸಪೇಟೆ ವಾಸಿ ಅಂತಾ ಹೇಳಿದ. ನೀವು ಎಲ್ಲಿಗೆ ಹೋಗಿದ್ದೀರಿ ಮತ್ತು ಎಲ್ಲಿಂದ ಬಂದಿರಿ? ಮುಂದೆ ಎಲ್ಲಿಗೆ ಹೋಗುತ್ತಿರುವಿರಿ? ಈ ಕಾರು ಯಾರದು? ಎಂದು ವಿಚಾರಿಸಿದಾಗ ಅವರು ಈ ಕಾರು ಹೊಸಪೇಟೆಯ ಕೆ.ಎಂ. ನಾಗರಾಜ ಇವರಿಗೆ ಸಂಬಂಧಿಸಿದ್ದು ಅಂತಾ ಹೇಳಿದರು. ಹಾಗೂ ಕಾರ್ಯ ನಿಮಿತ್ತ ಬಿಜಾಪುರಕ್ಕೆ ಬಂದಿದ್ದೆವು ಅಂತ ತಿಳಿಸಿದರು. ಪುನಃ ವಾಪಸ್ ಹೊಸಪೇಟೆಗೆ ಹಿಂದಿರುಗುತ್ತಿದ್ದೇವೆ ಅಂತಾ ತಿಳಿಸಿದರು. ಕಾರಿನ ಚಾಲಕನು ಕೆ.ಎಂ. ನಾಗರಾಜ ರವರ ಹತ್ತಿರ ಎಷ್ಟು ದಿನಗಳಿಂದ ಚಾಲಕನಾಗಿ ಕೆಲಸ ಮಾಡುತ್ತಿದ್ದೆಯಾ ಅಂತಾ ಕೇಳಲಾಗಿ ಅವನು ಸರಿಯಾದ ಉತ್ತರ ನೀಡಲಿಲ್ಲ. ಹಾಗೂ ನನ್ನನ್ನು ತಾತ್ಕಾಲಿಕ ಕೆಲಸದ ಮೇಲೆ ತೆಗೆದುಕೊಂಡಿದ್ದಾರೆ ಅಂತಾ ತಿಳಿಸಿದ. ಈ ಇಬ್ಬರು ನೀಡಿದಂತಹ ವಿವರಣೆ ಸಂಶಯಾಸ್ಪದವಾಗಿದ್ದರಿಂದ ಮತ್ತೆ ವಿಚಾರಣೆ ಮಾಡಿದ್ದೆವು. ನಂತರ ನಾಗಪ್ಪ ಎಂಬ ವ್ಯಕ್ತಿಯ ಜೇಬನ್ನು ಪರೀಕ್ಷಿಸಲಾಗಿ ಅವನ ಜೇಬಿನಲ್ಲಿ ಝಳಕಿ ಎಸ್.ಟಿ.ಡಿ.ಯಿಂದ ಕರೆ ಮಾಡಿದ ರಶೀದಿಗಳು ಸಿಕ್ಕವು. ಮುಂದೆ ಬಿಜಾಪುರಕ್ಕೆ ಬಂದಿದ್ದವರು ಯಾವ ಕಾರಣಕ್ಕಾಗಿ ಝಳಕಿಗೆ ಹೋಗಿದ್ದೀರಿ, ಅಂತಾ ಕೇಳಿದೆವು ಅದಕ್ಕೆ ಸರಿಯಾದ ಉತ್ತರ ನೀಡಲಿಲ್ಲ. ಮತ್ತಿಷ್ಟು ವಿಚಾರಣೆ ಮಾಡಲಾಗಿ ನಾಗಪ್ಪ ಎಂಬವನು ಝಳಕಿ ಕಡೆಯಿಂದ ಹೆಚ್‌ಆರ್-38-ಬಿಜಿ-3390 ನಂಬರಿನ ಗ್ಯಾಸ್ ಟ್ಯಾಂಕರಿನಲ್ಲಿ ಮದ್ಯ ತುಂಬಿಕೊಂಡು ಬರುತ್ತದೆ. ಆ ವಾಹನಕ್ಕೆ ಪೈಲಟ್ ಆಗಿ ಕೆಲಸ ನಿರ್ವಹಿಸಿ ಯಾವುದೇ ಅಬಕಾರಿ-ವ-ಪೊಲೀಸ್ ಅಧಿಕಾರಿಗಳು ರಸ್ತೆಯಲ್ಲಿ ಕಾವಲು ನಡೆಸುವ ಸಮಯವನ್ನು ಮುಂದಾಗಿ ತಿಳಿದುಕೊಂಡು ಮದ್ಯ ತುಂಬಿದ ಟ್ಯಾಂಕರನ್ನು ಕ್ಷೇಮವಾಗಿ ಹೊಸಪೇಟೆಗೆ ತರುವಂತೆ ಕೆ.ಎಂ. ನಾಗರಾಜ ಇವರು ಹೇಳಿದ್ದಾರೆ ಅಂತಾ ಹೇಳಿದ ಇಷ್ಟೆಲ್ಲ ವಿಚಾರಣೆ ಮಾಡುತ್ತಿದ್ದ ಸಮಯದಲ್ಲಿ ಝಳಕಿ ಕಡೆಯಿಂದ ಮೇಲೆ ಹೇಳಿದ ಗ್ಯಾಸ್ ಟ್ಯಾಂಕರ್ ವಾಹನ ಬಂತು ನಾವು ನಿಂತಿದ್ದು ನೋಡಿ ದೂರದಲ್ಲಿ ನಿಲ್ಲಿಸಿದ, ಅದರಲ್ಲಿ ಇದ್ದಂಥ ಚಾಲಕನು ಮತ್ತು ಕ್ಲೀನರ್ ಇಬ್ಬರು ಬೇರೆ ಬೇರೆ ದಿಕ್ಕಿಗೆ ಓಡಿ ಹೋದರು. ನಾವು ಅವರನ್ನು ಬೆನ್ನಟ್ಟಿ ಓಡಿ ಹೋಗಿ ಕ್ಲೀನರ್ ಮಾತ್ರ ಹಿಡಿಯಲು ಸಾಧ್ಯವಾಯಿತು. ಡ್ರೈವರ್ ಮಾತ್ರ ಸಿಗಲಿಲ್ಲ ಓಡಿ ಹೋದ. ಸದರಿ ಕ್ಲೀನರ್‌ನನ್ನು ವಿಚಾರಣೆ ಮಾಡಿ ಅವನ ಹೆಸರನ್ನು ಕೇಳಿದೆವು. ಅವನು ತನ್ನ ಹೆಸರು ರಮೇಶ ಅಂತಾ ಹಾಗೂ ರಾಜಾಸ್ತಾನದ ನಿವಾಸಿ ಅಂತಾ ಹೇಳಿದನು. ಸದರಿ ವ್ಯಕ್ತಿಯನ್ನು ಓಡಿ ಹೋದ ವ್ಯಕ್ತಿ ಚಾಲಕನ ಹೆಸರು ಮತ್ತು ವಿಳಾಸ ಕೇಳಲಾಗಿ, ಅವನ ಓಡಿ ಹೋದ ವ್ಯಕ್ತಿಯ ಹೆಸರು ಮುಬಾರಕ ಇಂಧೋರಿನ ವಾಸಿ ಅಂತಾ ಹೇಳಿದ ಮತ್ತು ಅವನು ವಿಳಾಸ ಗೊತ್ತಿಲ್ಲಾ ಅಂತಾ ಹೇಳಿದ. ನಾವು ಅವನನ್ನು ಯಾವ ಕಾರಣಕ್ಕಾಗಿ ಓಡಿಹೋದಿರಿ ಅಂತ ಕೇಳಿದ್ದಕ್ಕೆ ಗ್ಯಾಸ್ ಟ್ಯಾಂಕರಿನಲ್ಲಿ ಮದ್ಯ ತುಂಬಿದ್ದೇವೆ ಅದಕ್ಕೆ ಸಾಗಾಣಿಕೆ ಮಾಡಲು ಯಾವುದೇ ಕಾಗದ ಪತ್ರಗಳು ಇಲ್ಲ ಅಂತಾ ಹಿಂದಿ ಭಾಷೆಯಲ್ಲಿ ಹೇಳಿದ. ಸದರಿ ಟ್ಯಾಂಕರಿನ ಕಾಗದ ಪತ್ರಗಳನ್ನು ಕೇಳಲಾಗಿ ಅವನು ಕಾಗದ ಪತ್ರಗಳು ಕ್ಯಾಬಿನಲ್ಲಿ ಇವೆ ಅಂತಾ ಹೇಳಿದ. ನಾವು ಕ್ಯಾಬಿನನ್ನು ಪರಿಶೀಲನೆ ಮಾಡಿದಾಗ ವಾಹನದ ನೊಂದಣಿ ಸರ್ಟಿಫಿಕೇಟ್ ಅದು ನಕಲಿ ಇದ್ದದ್ದು, ಗ್ಯಾಸ್ ಸಾಗಾಣಿಕೆ ಮಾಡುವಂತಹ ರಶೀದಿ ಅದರಲ್ಲಿತ್ತು. ವಾಹನದ ಸರ್ಟಿಫಿಕೇಟ್‌ಗಳನ್ನು ಪರಿಶೀಲಿಸಲಾಗಿ ಅದರಲ್ಲಿ ನಮೂದಾದ ರಿಜಿಸ್ಟ್ರೇಶನ್ ನಂಬರಿಗೆ ಮತ್ತು ನಂಬರ್ ಪ್ಲೇಟಿಗೆ ಹೊಂದಾಣಿಕೆ ಇತ್ತು. ಆದರೆ ಚಾಸ್ಸಿ ನಂಬರ್ ಹೊಂದಾಣಿಕೆ ಇರುವುದಿಲ್ಲ. ಆ ಹೊತ್ತಿಗಾಗಲೇ ಕತ್ತಲಾಗಿತ್ತು. ಅದರಲ್ಲಿ ಮದ್ಯವನ್ನು ಹೇಗೆ ತುಂಬಿದ್ದೀರಿ ಮತ್ತು ಹೇಗೆ ಹೊರಗೆ ತೆಗೆಯಬೇಕು ಆ ಸದರಿ ಕ್ಲೀನರ್‌ನನ್ನು ವಿಚಾರಿಸಿದೆವು. ಅವನು ಗ್ಯಾಸ್ ಟ್ಯಾಂಕರಿನ ಹಿಂಬದಿ ಒಬ್ಬ ಮನುಷ್ಯ ತೂರಿಹೋಗುವಷ್ಟು ಖಿಂಡಿ ಇದೆ ಅದನ್ನು ಬೋಲ್ಟ್ ನಟ್ ಸಹಾಯದಿಂದ ಮುಚ್ಚಲಾಗಿದೆ. ಆ ಬೋಲ್ಟ್ ನಟ್‌ಗಳನ್ನು ಬಿಚ್ಚಿದರೆ ಟ್ಯಾಂಕರಿನ ಒಳಗಡೆ ಇರುವಂತಹ ಮದ್ಯವನ್ನು ಹೊರಗೆ ತೆಗೆಯಬಹುದು ಅಂತಾ ಹೇಳಿದ. ಆ ಸ್ಥಳದಲ್ಲಿ ಬೋಲ್ಟ್, ನಟ್‌ಗಳನ್ನು ಬಿಚ್ಚಲು ನಮ್ಮ ಹತ್ತಿರ ಸಲಕರಣೆಗಳು ಇರದೇ ಇದ್ದುದ್ದರಿಂದ ಹಾಗೂ ನಿರ್ಜನ ಪ್ರದೇಶವಾಗಿದ್ದರಿಂದ ಮತ್ತು ಕತ್ತಲಾಗಿದ್ದರಿಂದ ಈ ಕೆಲಸ ಇಲ್ಲಿ ಮಾಡಲು ಆಗುವುದಿಲ್ಲಾ ಎಂದು ತಿಳಿದು ಸದರಿ ಟ್ಯಾಂಕರ್, ಕಾರಿನಲ್ಲಿ ಸಿಕ್ಕಂಥಹ ಇಬ್ಬರು ವ್ಯಕ್ತಿಗಳನ್ನು ಹಾಗೂ ಕ್ಲೀನರನನ್ನು ಕರೆದುಕೊಂಡು ಅಬಕಾರಿ ಉಪ ಅಧೀಕ್ಷಕರ ಕಛೇರಿ ಆವರಣಕ್ಕೆ ಬಂದೆವು. ಆಗ ರಾತ್ರಿ 8.00 ಗಂಟೆ ಆಗಿತ್ತು. ಇಲ್ಲಿ ಬಂದ ನಂತರ ಹಿಂದಿನ ಕಿಂಡಿಯನ್ನು ಬಿಚ್ಚಿನೋಡಲಾಗಿ ಅದರಿಂದ ಕಟುವಾದ ಘಾಟ್ ವಾಸನೆ ಬರುತ್ತಾ ಇತ್ತು. ಮತ್ತು ಮದ್ಯದ ಪೆಟ್ಟಿಗೆಗಳು ಕಂಡುಬಂದವು. ಕೆಲವು ಬಾಟಲಿಗಳು ಒಡೆದು ಸೋರಿದ್ದು ಕಂಡು ಬಂತು. ಈ ಟ್ಯಾಂಕರಿನ ಒಳಗಡೆ ನಾವು ಬ್ಯಾಟರಿ ಸಹಾಯದಿಂದ ನೋಡಿದೆವು. ನಾವು ಈ ಮೊದಲು ಅಂದರೆ ಈ ಆವರಣಕ್ಕೆ ಬಂದ ನಂತರ ಕೆಲವು ಕೂಲಿ ಆಳುಗಳನ್ನು ಕರೆಯಿಸಿದೆವು. ಅವರ ಪೈಕಿ ಒಬ್ಬನು ಒಳಗೆ ಹೋಗಿ ನಂತರ ಕೆಲವು ಪೆಟ್ಟಿಗೆಗಳನ್ನು ಅವನ ಮುಖಾಂತರ ಹೊರಗೆ ತೆಗೆದೆವು. ಅವನು ಈ ಕೆಲಸವನ್ನು ಈಗ ಮಾಡಲಿಕ್ಕೆ ಆಗುವುದಿಲ್ಲಾ ಏಕೆಂದರೆ ಸಾಕಷ್ಟು ಗಾಳಿ ವ ಬೆಳಕು ಇರದೇ ಇದ್ದುದರಿಂದ ತನಗೆ ಉಸಿರು ಗಟ್ಟಿದಂಗೆ ಆಗುತ್ತದೆ ಅಂತಾ ಹೇಳಿದಾ. ಆದ್ದರಿಂದ ಆ ಕೆಲಸವನ್ನು ಅರ್ಧಕ್ಕೆ ನಿಲ್ಲಿಸಲಾಯಿತು. ನಾವು ಟ್ಯಾಂಕರ್, ಕಾರ, ಹಾಗೂ ಅವುಗಳಲ್ಲಿ ಇದ್ದ ವ್ಯಕ್ತಿಗಳನ್ನು ಕಾಯಲು ಅಬಕಾರಿ ಉಪ ಅಧೀಕ್ಷಕರ ಕಛೇರಿ ಬಿಜಾಪುರ ಉಪ ವಿಭಾಗದಲ್ಲಿ ಬಿಟ್ಟೆವು. ದಿನಾಂಕ: 02.01.2004 ರಂದು ಬೆಳಗ್ಗೆ 7.00 ಗಂಟೆಗೆ ಸಿಬ್ಬಂದಿ ಹಾಗೂ ಕೂಲಿ ಆಳುಗಳ ಸಹಾಯದಿಂದ ಮದ್ಯವನ್ನು ಟ್ಯಾಂಕರಿನಿಂದ ಒಂದೊಂದಾಗಿ ಹೊರತೆಗೆದೆವು. ಅದರಲ್ಲಿ ಓರಿಜಿನಲ್ ಚಾಯ್ಸ್ ವಿಸ್ಕಿಯ 465 ಬಾಕ್ಸ್‌ಗಳು ಪ್ರತಿಯೊಂದು ಬಾಕ್ಸ್‌ನಲ್ಲಿ 48x180 ಮಿಲಿಯ ಬಾಟಲಿಗಳು ಇದ್ದವು. ಅದೇ ರೀತಿ ಓಲ್ಡ್ ಮಂಕ್ ತ್ರಿಬಲ್ ಎಕ್ಸ್ ರಮ್ ಲೆಬಲ್ ಹೊಂದಿದ 410 ಪೆಟ್ಟಿಗೆಗಳು ಪ್ರತಿಯೊಂದು ಬಾಕ್ಸ್‌ನಲ್ಲಿ 48x180 ಮಿಲಿಯ ಬಾಟಲ್‌ಗಳು ಇದ್ದವು. ಓರಿಜಿನಲ್ ಚಾಯ್ಸ್ ವಿಸ್ಕಿಯ 30 ಬಾಟಲಿಗಳನ್ನು ಹಾಗೂ ಓಲ್ಡ್ ಮಂಕ್ ತ್ರಿಬಲ್‌ಎಕ್ಸ್ ರಮ್ 30 ಬಾಟಲಿಗಳನ್ನು ರಸಾಯನಿಕ ಪರೀಕ್ಷೆಗಾಗಿ ಪ್ರತ್ಯೇಕಿಸಿದೆವು. ಅವುಗಳ ಮೇಲೆ ಶೀಲು ಮಾಡಿ ನಮ್ಮ ಸಹಿಗಳುಳ್ಳ ಚೀಟಿಯನ್ನು ಹಚ್ಚಿದೆವು. ಮದ್ಯ, ಕಾರು, ಹಾಗೂ ಟ್ಯಾಂಕರನ್ನು ಜಪ್ತು ಮಾಡಿದೆವು. ಆಗ ಪಂಚನಾಮೆ ತಯಾರಿಸಿದ್ದು ಅದನ್ನು ಈಗ ನೋಡುತ್ತಿದ್ದು ಅದನ್ನು ಈಗಾಗಲೇ ನಿಶಾನೆ ಪಿ-2 ಅಂತಾ ಗುರುತಿಸಲಾಗಿದೆ. ಅದರಲ್ಲಿ ಇರುವಂತಹ ಸಹಿ ನಿಶಾನೆ ಪಿ-2 (ಎ) ಇದಕ್ಕೆ ನಾನಲ್ಲದೇ ಎ.ವಿ. ರಾವಳ, ಎಸ್.ಬಿ. ಶಿವಣಗಿ, ಉಳಿದ ಅಬಕಾರಿ ಸಿಬ್ಬಂದಿ ಜನರು ಸಹಿ ಮಾಡಿದ್ದಾರೆ ಸದರಿ ಪಂಚನಾಮೆಯನ್ನು ಅಬಕಾರಿ ಉಪ ಅಧೀಕ್ಷಕರು ಹೇಳಿದಂತೆ ದ್ವಿತೀಯ ದರ್ಜೆಯ ಸಹಾಯಕ ಅಬಕಾರಿ ಉಪ ಆಯುಕ್ತರ ಕಛೇರಿ ಬಿಜಾಪುರ ಇವರು ಬರೆದಿದ್ದಾರೆ. ಅದೇ ದಿವಸ ಮಧ್ಯಾಹ್ನ 2.00 ಗಂಟೆಯವರೆಗೆ ಸದರಿ ಪಂಚನಾಮೆಯನ್ನು ಬರೆದು ಮುಗಿಸಲಾಯಿತು. ಟ್ಯಾಂಕರಿನಿಂದ ಮದ್ಯವನ್ನು

ಹೊರಗೆ ತೆಗೆಯಲು ಬಂದಿದ್ದ ಕೂಲಿ ಕಾರ್ಮಿಕರ ಹೆಸರು ನನಗೆ ಜ್ಞಾಪಕ ಇಲ್ಲಾ ಆದರೆ ಒಬ್ಬನ ಹೆಸರು ಲಕ್ಷ್ಮಣ ಅಂತಾ ಇತ್ತು. ಪಂಚನಾಮೆ ಆದ ನಂತರ ಕಾರಿನಲ್ಲಿ ಸಿಕ್ಕಂತಹ ವ್ಯಕ್ತಿಗಳನ್ನು ಹಾಗೂ ಟ್ಯಾಂಕರಿನಲ್ಲಿ ಸಿಕ್ಕಂತಹ ಕ್ಲೀನರನನ್ನು ದಸ್ತಗಿರಿ ಮಾಡಿದೆವು. ನಂತರ ಆರೋಪಿತರನ್ನು ಹಾಗೂ ಮುದ್ದೇಮಾಲುಗಳನ್ನು ಬಿಜಾಪುರ ಉಪ ವಿಭಾಗದ ಅಬಕಾರಿ ಉಪ ನಿರೀಕ್ಷಕರು ಗುನ್ನೆ ದಾಖಲಿಸಲು ಹಾಗೂ ಮುಂದಿನ ಕ್ರಮಕ್ಕಾಗಿ ಕಾಗದ ಪತ್ರಗಳನ್ನು ಕೊಟ್ಟೆವು. ಜಪ್ತಾದ ಟ್ಯಾಂಕರನ್ನು ನೋಡಿದೆ. ಅದನ್ನು ಈಗಾಗಲೇ ಮುದ್ದೇಮಾಲು-1 ಎಂದು ಗುರುತಿಸಲಾಗಿದೆ. ಕಾರನ್ನು ನೋಡಿದೆ ಅದನ್ನು ಈಗಾಗಲೇ ಮುದ್ದೇಮಾಲು-2 ಎಂದು ಗುರುತಿಸಲಾಗಿದೆ. 30 ಓರಿಜಿನಲ್ ಚಾಯ್ಸ್ ವಿಸ್ಕಿಯ ಸ್ಯಾಂಪಲ್ ಬಾಟಲ್‌ಗಳನ್ನು ನೋಡುತ್ತಿದ್ದು ಅವುಗಳನ್ನು ಈಗಾಗಲೇ ಮುದ್ದೇಮಾಲು-3 ಎಂದು ಗುರುತಿಸಲಾಗಿದೆ. 30 ಓಲ್ಡ್ ಮಂಕ್ ರಮ್ ಸ್ಯಾಂಪಲ್ ಬಾಟಲ್‌ಗಳನ್ನು ನೋಡುತ್ತಿದ್ದು ಅವುಗಳನ್ನು ಈಗಾಗಲೇ ಮುದ್ದೇಮಾಲು-4 ಎಂದು ಗುರುತಿಸಲಾಗಿದೆ. ಮುದ್ದೇಮಾಲು 1 ರಿಂದ 4 ನಾವು ದಿನಾಂಕ: 02.01.2004 ರಂದು ಜಪ್ತಿ ಮಾಡಿದ ಮುದ್ದೇಮಾಲುಗಳು ಇರುತ್ತವೆ ಅಂತಾ ಸಾಕ್ಷಿ ನುಡಿದಿರುತ್ತಾರೆ. ಸದರಿ ಸಮಯದಲ್ಲಿ ಅರ್ಜಿದಾರರ ಪರ ವಕೀಲರು ಹಾಜರು ಇರುತ್ತಾರೆ.

ಸದರಿ ಅರ್ಜಿದಾರರ ಪರ ವಕೀಲರು ಮಾಡಿದ ಪಾಟೀ ಸವಾಲಿಗೆ ಉತ್ತರಿಸುತ್ತಾ ನಾನು ಬೆಳಗಾಂವ್ ವಿಭಾಗದ ಅಬಕಾರಿ ಉಪ ಅಧೀಕ್ಷಕರ ಕಛೇರಿಗೆ ದಿನಾಂಕ: 31.12.2003 ರಂದು ಹೋದಾಗ ಸುಮಾರು 12-, 12-30 ಆಗಿರಬಹುದು. ಈ ಮೊಕದ್ದಮೆಯ ಬಗ್ಗೆ ರೈಡ್ ಮಾಡಲು ಹೋಗಬೇಕಾಗಿದೆ ಎಂದು ಉಪ ಅಧೀಕ್ಷಕರೆ ಹೇಳಿದರು. ನಾವು ಬೆಳಗಾಂವದಿಂದ ಒಂದೇ ಗಾಡಿಯಲ್ಲಿ ಬಂದೆವು. ನಾವು ವಾಚ್ ಮಾಡುತ್ತಾ ನಿಂತ ಸ್ಥಳದ ಚಕ್‌ಬಂಧಿ ನನಗೆ ಈಗ ನೆನಪು ಇರುವುದಿಲ್ಲ.

ನಾವು ದಿನಾಂಕ: 31.12.2003ರ ಸಾಯಂಕಾಲ 5.00 ಗಂಟೆಯಿಂದ ಮಾರನೇ ದಿವಸ ಮಧ್ಯಾಹ್ನ 4.00 ಗಂಟೆಯವರೆಗೆ ವಾಚ್ ಮಾಡುವ ಸ್ಥಳವನ್ನು ಎಲ್ಲೂ ಬಿಟ್ಟು ಹೋಗಿರಲಿಲ್ಲ. ಊಟಕ್ಕೆ ನಾವು ಬ್ರೆಡ್ ಮತ್ತು ಇತರೆ ತಿಂಡಿಗಳನ್ನು ಜೊತೆಗೆ ತೆಗೆದುಕೊಂಡು ಬಂದಿದ್ದೆವು. ನಾವು ಇಂಡಿಕಾ ಕಾರನ್ನು ನಿಲ್ಲಿಸಲು ಸೂಚಿಸಿದಾಗ ತಕ್ಷಣ ನಿಂತು ಅವರು ಯಾರು ಓಡಿ ಹೋಗಲು ಪ್ರಯತ್ನಿಸಲಿಲ್ಲ. ನಾವು ಕೃತ್ಯ ನಡೆದ ದಿನಾಂಕದಂದು ಈ ಪ್ರಕರಣದಲ್ಲಿ ಜಪ್ತು ಮಾಡಿರುವ ಇಂಡಿಕಾ ಕಾರನ್ನು ಮತ್ತು ಅದರಲ್ಲಿ ಇದ್ದಂತ ವ್ಯಕ್ತಿಗಳನ್ನು ಭೂತನಾಳ ಹಳ್ಳದ ಸೇತುವೆಯ ಹತ್ತಿರ ಹಿಡಿದೆವು ಅಂತ ಸುಳ್ಳು ಹೇಳುತ್ತಿದ್ದೇನೆ ಅನ್ನುವುದು ಸರಿಯಲ್ಲಾ ನಾವು ಕಾರಿನಲ್ಲಿ ಇದ್ದಂಥಹ ವ್ಯಕ್ತಿಗಳನ್ನು ಮತ್ತು ಕಾರನ್ನು ಬೆಳಗಾಂವದಿಂದಲೇ ಕರೆ ತಂದಿದ್ದು ಅಂತ ಸೂಚಿಸುವುದು ಸರಿಯಲ್ಲಾ. ನಾವು ಕಾರನ್ನು ಹಿಡಿದಾಗ ಆ ಕಾರಿನಲ್ಲಿ ಇದ್ದಂತಹ ವ್ಯಕ್ತಿಗಳು ನಮಗೆ ಗ್ಯಾಸ್ ಟ್ಯಾಂಕರಿನ ಬಗ್ಗೆ ಮಾಹಿತಿ ನೀಡಿದರು ಅಂತ ಸುಳ್ಳು ಹೇಳುತ್ತೇನೆ ಎಂದರೆ ಸರಿಯಲ್ಲಾ. ಇದೆಲ್ಲಾ ನಮ್ಮ ಜಂಟಿ ಆಯುಕ್ತರು (ಜಾರಿ ಮತ್ತು ತನಿಖೆ) ಮಾಡಿದಂಥ ಕಟ್ಟು ಕಥೆ ಎನ್ನುವುದು ಸರಿಯಲ್ಲ. ನಾನು ಕಾರನ್ನು ಯಾರಿಗೆ ಸೇರಿದೆ ಅಂತ ದಾಖಲಾತಿಗಳನ್ನು ಪರಿಶೀಲನೆ ಮಾಡಿರುವುದಿಲ್ಲ. ಕಾರಿಗೆ ಸಂಬಂಧಪಟ್ಟಂತಹ ಯಾವುದೇ ಕಾಗದ ಪತ್ರಗಳನ್ನು ಅಂದರೆ ಬಿಲ್ಲು ವಗೈರೆ ಹಾಗೂ ಕಾಗದ ಪತ್ರಗಳನ್ನು ನಾನು ಸ್ವಂತಕ್ಕೆ ನೋಡಿರುವುದಿಲ್ಲ. ನಾವು ಕಾರಿನಲ್ಲಿ ಇದ್ದಂತಹ ವ್ಯಕ್ತಿಗಳ ಹೇಳಿಕೆಯನ್ನು ಪಡೆದಿರುವುದಿಲ್ಲ. ನಮ್ಮ ಜಂಟಿ ಆಯುಕ್ತರು ವಿಚಾರಣೆ ಮಾಡಿದಾಗ ಸದರಿ ಕಾರು ಕೆ.ಎಂ. ನಾಗರಾಜ ಇವರ ಮಾಲ್ಕಿಯದು ಇರುತ್ತದೆ ಅಂತ ಕಾರಿನಲ್ಲಿ ಇದ್ದಂತಹ ವ್ಯಕ್ತಿಗಳೇ ಹೇಳಿದ್ದರು. ಮುದ್ದೇಮಾಲು-2 ಕಾರು ಇದು ಕೆ.ಎಂ. ನಾಗರಾಜ ಎಂಬುವ ವ್ಯಕ್ತಿಗೆ ಸೇರಿದ್ದು ಅಲ್ಲಾ ಅಂತ ಹಾಗೂ ಕಾರಿಗೂ ಮತ್ತು ಸದರಿ ಕೆ.ಎಂ. ನಾಗರಾಜ ರವರಿಗೂ ಯಾವುದೇ ಸಂಬಂಧವಿರುವುದಿಲ್ಲವೆಂದು ಸೂಚಿಸುವುದು ಸುಳ್ಳು. ಸದರಿ ಕಾರು ಕೆ.ಎಂ. ನಾಗರಾಜ ಸಂಬಂಧಪಟ್ಟಿದ್ದು ಅಂತ ತೋರಿಸಲು ನಾನು ಯಾವುದೇ ದಾಖಲಾತಿ ಹಾಜರುಪಡಿಸಿಲ್ಲ. ಅಂದು ರಾತ್ರಿ ಉಪ ಅಧೀಕ್ಷಕರು ಕಛೇರಿಯ ಆವರಣದಲ್ಲಿ ಟ್ಯಾಂಕರ್‌ನ ಹಿಂಬದಿಯ ಕಿಂಡಕಿಯನ್ನು ತೆಗೆದು ನೋಡಿದ ಕಾರ್ಮಿಕನ ಹೆಸರು ಲಕ್ಷ್ಮಣ ಅಂತ ಇರುತ್ತದೆ. ಈ ಪ್ರಕರಣದಲ್ಲಿ ನಮ್ಮ ಅಬಕಾರಿ ಉಪ ಅಧೀಕ್ಷಕರಾದ ಶ್ರೀ ಟಿ.ಎಸ್. ಮೇತ್ರಿ ರವರು ಫಿರ್ಯಾಧಿ ಸಲ್ಲಿಸಿರುತ್ತಾರೆ. ನಿಶಾನೆ ಪಿ-2 ಅನ್ನು ಬೆಳಿಗ್ಗೆ 7.00 ಗಂಟೆಯಿಂದ ಬರೆಯಲು ಪ್ರಾರಂಭಿಸಲಾಯಿತು. ಆಗ ಬಂದ ಕೂಲಿ ಕಾರ್ಮಿಕರಿಗೆ ಪಂಚರಾಗಲು ನಾವು ಕೇಳಲಿಲ್ಲ. ಆರೋಪಿ: ನಾಗಪ್ಪನ ಜೇಬಿನಲ್ಲಿ ದೊರೆತ ಫೋನು ಬಿಲ್ಲು ಯಾವ ನಂಬರಿಗೆ ಕರೆ ಮಾಡಿದ್ದಾರೋ ಎಂಬುದು ಗೊತ್ತಿಲ್ಲಾ ಹಾಗೂ ದೂರವಾಣಿ ಎಲ್ಲಿಂದ ಎಲ್ಲಿಗೆ ಮಾಡಿದ್ದರೊ ನಮಗೆ ಗೊತ್ತಿಲ್ಲ. ಮುದ್ದೇಮಾಲು-2 ಕಾರಿನಲ್ಲಿ ಯಾವುದೇ ಮದ್ಯ ಇರುವುದಿಲ್ಲ. ನನ್ನ ಹೇಳಿಕೆಯನ್ನು ಪಡೆದಿರುವುದಿಲ್ಲ. ಅಂದು ನಾನು ರೈಡಿಗೆ ಹೋಗೆ ಇಲ್ಲ ಮತ್ತು ಸ್ಥಳದಲ್ಲಿ ಕಾರು ಬಂದೇ ಇಲ್ಲ ಅಂತ ಅನ್ನುವುದು ಸರಿಯಲ್ಲ. ನಾನು ನಮ್ಮ ಅಬಕಾರಿ ಜಂಟಿ ಆಯುಕ್ತರ ಮಾತು ಕೇಳಿ ಸುಳ್ಳು ಸಾಕ್ಷಿ ಹೇಳುತ್ತಿದ್ದೇನೆ ಎಂದರೆ ಸರಿಯಲ್ಲ. ಅಂತ ಸಾಕ್ಷಿ ನುಡಿದಿರುತ್ತಾರೆ. ಟ್ಯಾಂಕರ್ ಮಾಲೀಕರ ಪರವಾಗಿ ಯಾರು ಹಾಜರು ಇರುವುದಿಲ್ಲ. ಆದ್ದರಿಂದ ಪಾಟೀ ಸವಾಲು ಇಲ್ಲ ಅಂತ ತೆಗೆದುಕೊಳ್ಳಲಾಯಿತು.

ದಿನಾಂಕ: 09.11.2004 ರಂದು ಪ್ರಾ.ಸಾ-3 ಇವರು ಸಾಕ್ಷಿ ನುಡಿಯುತ್ತಾ ಕಳೆದು ಎರಡು ವರ್ಷದಿಂದ ಬಿಜಾಪುರ ಉಪ ವಲಯದಲ್ಲಿ ಅಬಕಾರಿ ಉಪ ನಿರೀಕ್ಷಕರು ಅಂತ ಸೇವೆ ಸಲ್ಲಿಸುತ್ತಾ ಇದ್ದೇನೆ. ದಿನಾಂಕ: 09.02.2004ರಂದು ಈ ಪ್ರಕರಣದ ಸ್ಯಾಂಪಲ್ ಬಾಟಲ್‌ಗಳನ್ನು ಅಬಕಾರಿ ರಕ್ಷಕರಾದ ಶ್ರೀ ಎಸ್.ಎಂ. ಹುದ್ದಾರ ಇವರ ಮುಖಾಂತರ ರಸಾಯನಿಕ ತಜ್ಞರ ಬಳಿಗೆ ಕಳುಹಿಸಿದೆ. ಅವರಿಗೆ ಬರೆದಂಥ ಪತ್ರದ ಪ್ರತಿ ಈಗ ನೋಡುತ್ತಿದ್ದು ಅದನ್ನು ನಿಶಾನೆ-ಪಿ-4 ಅಂತ ಗುರುತಿಸಲಾಯಿತು. ಈ ಎರಡು ಸ್ಯಾಂಪಲಿನ ಬಾಟಲ್‌ಗಳನ್ನು ವಿಶ್ಲೇಷಣೆಗಾಗಿ ಕಳುಹಿಸಿದ್ದೆ ಸ್ಯಾಂಪಲ್ ಬಾಟಲ್‌ಗಳನ್ನು ಈಗ ನೋಡುತ್ತಿದ್ದು, ಅವುಗಳನ್ನು ಈಗಾಗಲೇ ಮುದ್ದೇಮಾಲು-3 ಮತ್ತು 4 ಅಂತ ಗುರುತಿಸಲಾಗಿದೆ. ದಿನಾಂಕ: 11.02.2004ರಂದು ರಸಾಯನಿಕ ತಜ್ಞರ ವರದಿ ಹಾಗೂ ಸ್ಯಾಂಪಲ್ ಬಾಟಲ್‌ಗಳನ್ನು ಶ್ರೀ ಎಸ್.ಎಂ. ಹುದ್ದಾರ ಅ.ರ. ಇವರು ನನ್ನ ಮುಂದೆ ತಂದು ಹಾಜರುಪಡಿಸಿದರು. ಈಗ ರಸಾಯನಿಕ ವಿಶ್ಲೇಷಣಾ ವರದಿಯ ಪ್ರತಿಯನ್ನು ನೋಡುತ್ತಿದ್ದು ಅದನ್ನು ನಿಶಾನೆ ಪಿ-5 ಎಂದು ಗುರುತಿಸಲಾಯಿತು. ಸದರಿ ವಿಶ್ಲೇಷಣಾ ವರದಿಯನ್ನು ದಾಖಲಾತಿಗಳಲ್ಲಿ ಶಾಮೀಲು ಮಾಡಿಕೊಂಡೆ ಅಂತ ಸಾಕ್ಷಿ ನುಡಿದಿರುತ್ತಾರೆ. ಅರ್ಜಿದಾರರ ಪರ ವಕೀಲರು ಹಾಜರು ಇದ್ದು ಅವರ ಪಾಟಿ ಸವಾಲುಗಳಿಗೆ ಉತ್ತರ ಸಲ್ಲಿಸುತ್ತಾ ಈ ಪ್ರಕರಣದಲ್ಲಿ ನಾನು ತನಿಖಾಧಿಕಾರಿ ಇದ್ದೇನೆ. ಕಾರಿನ ಮಾಲೀಕರ ಬಗ್ಗೆ ಇನ್ನು ನಾನು ತಪಾಸಣೆ ಮಾಡುತ್ತಾ ಇದ್ದೇನೆ. ಇಲ್ಲಿಯವರೆಗೆ ಕಾರಿನ ಮಾಲೀಕರು ಯಾರು ಅಂತ ತಿಳಿದು ಬಂದಿರುವುದಿಲ್ಲ. ನಾನು ಯಾವುದೇ ತನಿಖೆಯನ್ನು ಮಾಡಿಲ್ಲ ಮತ್ತು ಸುಳ್ಳು ಸಾಕ್ಷಿ ಹೇಳುತ್ತಿದ್ದೇನೆ ಎಂದರೆ ಸರಿಯಲ್ಲ ಅಂತ ಸಾಕ್ಷಿ ನುಡಿದಿರುತ್ತಾರೆ.

ದಿನಾಂಕ:04.01.2005ರಂದು ಪ್ರಾ.ಸಾ.4 ರವರು ಸಾಕ್ಷಿ ನುಡಿಯುತ್ತಾ, ನಾನು ದಿನಾಂಕ: 02.07.2002 ರಿಂದ 31.05.2004 ರವರೆಗೆ ಬೆಳಗಾಂವ್ ವಿಭಾಗದಲ್ಲಿ ಅಬಕಾರಿ ಉಪ ಅಧೀಕ್ಷಕ ಅಂತ ಕಾರ್ಯನಿರ್ವಹಿಸಿರುತ್ತೇನೆ. ದಿನಾಂಕ: 31.12.2003 ರಂದು ಅಬಕಾರಿ ಜಂಟಿ ಆಯುಕ್ತರು (ಜಾರಿ ಮತ್ತು ತನಿಖೆ) ಬೆಳಗಾಂವ್ ವಿಭಾಗ ಬೆಳಗಾಂವ್ ರವರು ಮಧ್ಯಾಹ್ನ 12.45ಕ್ಕೆ ಕರೆಯಿಸಿದರು. ಮತ್ತು ಮೌಖಿಕವಾಗಿ ನಾನು ಹಾಗೂ ನಮ್ಮ ಸಿಬ್ಬಂದಿ ಜನರೊಂದಿಗೆ ತಮ್ಮೊಟ್ಟಿಗೆ ಬಿಜಾಪುರಕ್ಕೆ ಬರಲು ತಿಳಿಸಿದರು. ಆಗ ನಾನು ಬೆಳಗಾಂವ್ ಮಧ್ಯಾಹ್ನ 1.15ಕ್ಕೆ ಬಿಟ್ಟು ಎಲ್ಲಿಯೂ ನಿಲ್ಲದೇ ಬಿಜಾಪುರಕ್ಕೆ ಬಂದು ಮುಟ್ಟಿದಾಗ ಸಂಜೆ 5.00 ಗಂಟೆಯಾಗಿತ್ತು. ನಾವು ಬಿಜಾಪುರಕ್ಕೆ ಬಂದಾಗ ರಾಷ್ಟ್ರೀಯ ಹೆದ್ದಾರಿ-13ರ ಬಿಜಾಪುರ ಬೈಪಾಸ್ ರಸ್ತೆಯಿಂದ ಸೊಲ್ಲಾಪುರದ ಕಡೆಯಿಂದ ಹೊಸಪೇಟೆ ಕಡೆಗೆ ಅಕ್ರಮವಾಗಿ ಮದ್ಯವನ್ನು ಸಾಗಿಸುವ ಬಗ್ಗೆ ಖಚಿತವಾದ ಮಾಹಿತಿ ಬಂದಿರುತ್ತದೆ ಅಂತ ತಿಳಿಸಿದರು. ನಾವು ಬೆಳಗಾಂವ್‌ಯಿಂದ ಬಂದ ವಾಹನ ಸಂಖ್ಯೆ: ಕೆಎ:22:ಜಿ:277 ಇದೆ ಅಲ್ಲದೇ ರಾಷ್ಟ್ರೀಯ ಹೆದ್ದಾರಿ-13ರ ಮೇಲೆ ಸೊಲ್ಲಾಪುರ

ಕಡೆಯಿಂದ ಕೆಎ:03:ಝಡ್:705 ನಂಬರಿನ ಟಾಟಾ ಇಂಡಿಕಾ ಬೆಳ್ಳಿ ಬಣ್ಣದ ಕಾರು ಮೊದಲು ಬರುತ್ತದೆ. ಮತ್ತು ಆ ಕಾರಿನಲ್ಲಿ ಇಬ್ಬರು ವ್ಯಕ್ತಿಗಳು ಇರುತ್ತಾರೆ. ಈ ವ್ಯಕ್ತಿಗಳು ರಾಷ್ಟ್ರೀಯ ಹೆದ್ದಾರಿ-13ರಲ್ಲಿ ಅಬಕಾರಿ-ವ- ಪೊಲೀಸ್ ಅಧಿಕಾರಿಗಳು ಯಾರಾದರೂ ರಸ್ತೆ ಮೇಲೆ ಇರುತ್ತಾರೋ ಹೇಗೆ? ಎಂಬುದರ ಬಗ್ಗೆ ಹಿಂದೆ ಬರುತ್ತಿದ್ದ ಗ್ಯಾಸ್ ಟ್ಯಾಂಕರಿನ ಚಾಲಕನಿಗೆ ತಿಳಿಸುತ್ತಿದ್ದರು. ಸದರಿ ಗ್ಯಾಸ್ ಟ್ಯಾಂಕರಿನಲ್ಲಿ ಸುಂಕ ಸರ್ಕಾರಕ್ಕೆ ತುಂಬದೇ ಕಳ್ಳತನದಿಂದ ಮದ್ಯವನ್ನು ಸಾಗಿಸುತ್ತಿದ್ದರು. ಈ ರಸ್ತೆ ಕಾವಲನ್ನು ನಾವು ದಿನಾಂಕ: 31.12.2003 ರಂದು ಸಂಜೆ 5.00 ರಿಂದ ದಿನಾಂಕ: 01.01.2004ರ ಮಧ್ಯ ರಾತ್ರಿವರೆಗೆ ಮರೆಯಾಗಿ ಕುಳಿತು ರಸ್ತೆ ಗಸ್ತು ನಡೆಸಬೇಕು ಎಂದು ತಿಳಿಸಿದರು. ದಿನಾಂಕ:01.01.2004ರಂದು ನಾವು ಬಿಜಾಪುರ ಬಳಿ ಇರುವ ಭೂತನಾಳ ಹಳ್ಳದ ಸೇತುವೆಯ ಹತ್ತಿರ ರಾಷ್ಟ್ರೀಯ ಹೆದ್ದಾರಿ-13ರ ಮೇಲೆ ಗಸ್ತು ನಡೆಸುತ್ತಿದ್ದಾಗ ಸಂಜೆ 4.00 ಗಂಟೆ ಸುಮಾರಿಗೆ ಕಾರು ನಂ.ಕೆಎ:03:ಝಡ್:705 ಸೊಲ್ಲಾಪುರ ಕಡೆಯಿಂದ ಬರುವುದನ್ನು ಕಂಡು ಅಡ್ಡಗಟ್ಟಿ ತಡೆದು ನಿಲ್ಲಿಸಿದೆವು. ಅದರಲ್ಲಿ ಇಬ್ಬರು ವ್ಯಕ್ತಿಗಳು ಇದ್ದು. ಅವರ ಹೆಸರು ವಿಚಾರಿಸಲಾಗಿ, ಆ ಕಾರು ಚಾಲನೆ ಮಾಡುತ್ತಿದ್ದ ವ್ಯಕ್ತಿಯು ತನ್ನ ಹೆಸರು ಅಮರಯ್ಯ ಸಾ: ಲಿಂಗಸೂರ ವಾಸಿ ಅಂತ ಮತ್ತೊಬ್ಬ ತನ್ನ ಹೆಸರು ನಾಗಪ್ಪ ಹೊಸಪೇಟೆ ವಾಸಿ ಅಂತ ಹೇಳಿದ, ಅವರಿಗೆ ತಾವು ಎಲ್ಲಿಂದ ನೀವು ಬಂದಿರಿ? ಎಲ್ಲಿಗೆ ಹೋಗುತ್ತಿರುವಿರಿ? ಈ ಕಾರು ಯಾರದು? ಎಂದು ವಿಚಾರಿಸಿದಾಗ ಈ ಕಾರು ಹೊಸಪೇಟೆಯ ಕೆ.ಎಂ. ನಾಗರಾಜ ಇವರಿಗೆ ಸಂಬಂಧಿಸಿದ್ದು, ನಾವು ಕೆಲಸದ ನಿಮಿತ್ತ ಬಿಜಾಪುರಕ್ಕೆ ಬಂದಿರುವೆವು ಮತ್ತು ಕೆಲಸ ಮುಗಿಸಿಕೊಂಡು ಹೊಸಪೇಟೆಗೆ ಹೋಗುವವರಿದ್ದೇವೆ ಅಂತ ಹೇಳಿದರು. ಸದರಿ ಕಾರಿನ ಮೇಲೆ ಎಷ್ಟು ದಿನದಿಂದ ಕೆಲಸ ನಿರ್ವಹಿಸುತ್ತಿದ್ದ ಬಗ್ಗೆ ವಿಚಾರಿಸಲಾಗಿ ಅವನು ಸಕಾರಾತ್ಮಕ ಉತ್ತರ ನೀಡಲಿಲ್ಲ. ತಾನು ಲಿಂಗಸೂರ ಸ್ವಾಮಿಯ ಕಾರಿನ ಚಾಲಕ ಅಂತ ತಾನು ನಿನ್ನೆ ಹೊಸಪೇಟೆಗೆ ಬಂದಾಗ ತಾತ್ಕಾಲಿಕವಾಗಿ ನಾಗಪ್ಪ ಇವರ ಜೊತೆಗೆ ಬಿಜಾಪುರಕ್ಕೆ ಹೋಗಲು ಶ್ರೀ ಕೆ.ಎಂ. ನಾಗರಾಜ ತಿಳಿಸಿದರೆಂದು ಹಾಗೂ ಸಾಕಷ್ಟು ಸಂಭಾವನೆಯನ್ನು ಕೊಡುವುದಾಗಿ ತಿಳಿಸಿರುವರೆಂದು ಆ ಕಾರಣದಿಂದ ನಾನು ಈ ಕಾರಿನ ಚಾಲಕನಾಗಿ ಬಂದಿರುವುದಾಗಿ ತಿಳಿಸಿದನು. ಇನ್ನುಳಿದ ವಿಷಯಗಳ ಬಗ್ಗೆ ವಿಚಾರಣೆ ಮಾಡಲಾಗಿ ಆ ವ್ಯಕ್ತಿಯು ಸಮರ್ಪಕ ಉತ್ತರಗಳನ್ನು ನೀಡದೇ ಇದ್ದ ಕಾರಣ ಹಾಗೂ ಅವರ ಮೇಲೆ ಸಂಶಯ ಬಂದು ಅವರನ್ನು ಹೆಚ್ಚಿನ ವಿಚಾರಣೆ ಮಾಡಲಾಗಿ ಅವರೆಲ್ಲ ತಿಳಿಸಿದ ವಿಷಯಗಳು ಸುಳ್ಳು ಎಂಬುದು ಖಾತ್ರಿ ಆಯಿತು. ನಂತರ ನಾಗಪ್ಪ ಹಾಜರು ಪಡಿಸಿದ ದೂರವಾಣಿ ಬಿಲ್ಲುಗಳನ್ನು ನೋಡಲಾಗಿ ಅವನು ಕೆ.ಎಂ. ನಾಗರಾಜ ಇವರಿಗೆ 3 ಸಲ ದೂರವಾಣಿ ಮಾಡಿದ್ದು ಕಂಡು ಬಂದಿತು ಸದರಿ ವ್ಯಕ್ತಿಗಳು ತಿಳಿಸಿದ ಪ್ರಕಾರ ಬಿಜಾಪುರದಲ್ಲಿ ಇರುವುದನ್ನು ಬಿಟ್ಟು ಸೊಲ್ಲಾಪುರದ ಕಡೆಗೆ ಏಕೆ ಹೋಗಿದ್ದಿರಿ ಅಂತ ವಿಚಾರಿಸಲಾಗಿ ಅದಕ್ಕೆ ಅವರು ಸಮರ್ಪಕವಾಗಿ ಉತ್ತರ ನೀಡಲಿಲ್ಲ ಇದರಿಂದಾಗಿ ಆ ವ್ಯಕ್ತಿಗಳ ಮೇಲೆ ಸಂಶಯ ಇನ್ನು ಬಲವಾಯಿತು. ಅವರನ್ನು ಹೆಚ್ಚಿನ ವಿಚಾರಣೆಗಾಗಿ ಅಳವಡಿಸಲಾಗಿ ಸದರಿ ವ್ಯಕ್ತಿಗಳು ಝಳಕಿ ಕಡೆಯಿಂದ ಹೆಚ್.ಆರ್.38-ಬಿಜಿ-3390 ಎನ್ನುವ ನಂಬರಿನ ಗ್ಯಾಸ್ ಟ್ಯಾಂಕರಿನಲ್ಲಿ ಮದ್ಯದ ಸರಕು ಬರುತ್ತದೆ. ಆದ್ದರಿಂದ ತಾವು ಮುಂಗಾವಲಾಗಿ ಕೆಲಸ ನಿರ್ವಹಿಸಿದ್ದಾಗಿ ಅವರು ತಿಳಿಸಿದರು. ಇದೇ ಸಮಯದಲ್ಲಿ ಝಳಕಿ ಕಡೆಯಿಂದ ಮೇಲೆ ನಮೂದಿಸಿದ ಗ್ಯಾಸ್ ಟ್ಯಾಂಕರ್ ಬರುತ್ತಿರುವುದನ್ನು ಕಂಡೆವು. ಆ ಸಮಯದಲ್ಲಿ ಸದರಿ ಟ್ಯಾಂಕರನ್ನು ಸದರಿ ಕಾರಿನ ಹಿಂಬದಿಗೆ ನಿಲ್ಲಿಸಿ ಚಾಲಕನು ಪಶ್ಚಿಮ ದಿಕ್ಕಿಗೆ ಓಡಿ ಹೋದನು ಹಾಗೂ ಇನ್ನೊಬ್ಬನು ಪೂರ್ವಕ್ಕೆ ಓಡಿ ಹೋದನು ಹೀಗೆ ವಿರುದ್ಧ ದಿಕ್ಕಿನಲ್ಲಿ ಇಬ್ಬರು ಓಡುತ್ತಿರುವುದನ್ನು ಕಂಡು ನಾವು ಬೆನ್ನಟ್ಟಿದಾಗ ಟ್ಯಾಂಕರಿನ ಚಾಲಕನು ತಪ್ಪಿಸಿಕೊಂಡು ಓಡಿ ಹೋದ ಮತ್ತೊಬ್ಬ ವ್ಯಕ್ತಿಯನ್ನು ಸುಮಾರು ಅರ್ಧ ಕಿ.ಮೀ. ಬೆನ್ನಟ್ಟಿ ಹಿಡಿಯಲಾಯಿತು. ಆತನ ಹೆಸರನ್ನು ವಿಚಾರಿಸಲಾಗಿ ಆತನು ತನ್ನ ಹೆಸರು ರಾಜೇಶ್ ಉರ್ಫ್ ರಮೇಶ ಸಾ: ರಾಜಸ್ತಾನ್ ರಾಜ್ಯ ಅಂತ ತಿಳಿಸಿದನು. ಮತ್ತು ಓಡಿ ಹೋದ ವ್ಯಕ್ತಿ ಟ್ಯಾಂಕರಿನ ಚಾಲಕನಾಗಿದ್ದು ಅವನ ಹೆಸರು ಮುಬಾರಕ ಸಾ: ಇಂಧೋರ ಅಂತ ಹೇಳಿದನು. ಹಾಗೂ ತಾವು ಮದ್ಯದ ಬಾಟಲ್‌ಗಳನ್ನು ಟ್ಯಾಂಕರಿನಲ್ಲಿ ತುಂಬಿ ಸಾಗಿಸುತ್ತಿರುವುದಾಗಿ ಅವುಗಳಿಗೆ ಯಾವುದೇ ದಾಖಲಾತಿ ಇಲ್ಲವೆಂದು ತಿಳಿಸಿದ ಅಲ್ಲಿಂದ ವಾಹನದ ಬಳಿ ಬಂದು ಟ್ಯಾಂಕರಿನ ಕ್ಯಾಬಿನ್ ಪರೀಕ್ಷಿಸಲಾಗಿ ನೋಂದಣಿ ಸರ್ಟಿಫಿಕೇಟ್ ಪ್ರತಿ ಗ್ಯಾಸ್‌ಕ್ಕೆ ಸಂಬಂಧಿಸಿದಂತೆ ಇರುವ ಕೆಲವು ದಾಖಲಾತಿಗಳು ಸಿಕ್ಕವು. ಆರ್.ಸಿ. ಪುಸ್ತಕದಲ್ಲಿ ನಮೂದಿಸಿದ ಛಾಸ್ಸಿ ನಂಬರ್ ಹಾಗೂ ಟ್ಯಾಂಕರಿನ ಮೇಲೆ ಇದ್ದ ಛಾಸ್ಸಿ ನಂಬರ್ ಹೊಂದಾಣಿಕೆ ಇರಲಿಲ್ಲ. ಕಾರಿನಲ್ಲಿ ಬಂದಿದ್ದ ಅಮರಯ್ಯನನ್ನು ವಿಚಾರಿಸಲಾಗಿ ಕೆ.ಎಂ. ನಾಗರಾಜ ತಿಳಿಸಿದ ವಾಹನ ಇದೇ ಅಂತ ವಾಹನ ಆಗಿದ್ದು ಇದರಲ್ಲಿ ಗ್ಯಾಸ್ ಬದಲಾಗಿ ಮದ್ಯ ಇರುವುದಾಗಿ ತಿಳಿಸಿದ ಅಲ್ಲದೇ ಅದರಲ್ಲಿ ಅಂದಾಜು 800 ಮದ್ಯದ ಪೆಟ್ಟಿಗೆಗಳು ಇರುವುದಾಗಿ ತಿಳಿಸಿದ ಗ್ಯಾಸ್‌ನ ಟ್ಯಾಂಕರಿನ ಹಿಂದಿನ ಕಿಂಡಿಯಿಂದ ಮದ್ಯದ ಪೆಟ್ಟಿಗೆಗಳನ್ನು ಒಳಗೆ ಇಡಲಾಯಿತೆಂದು ತಿಳಿಸಿದ. ಆ ವೇಳೆ ಸಾಯಂಕಾಲ 6.00 ಗಂಟೆಯ ಸಮಯ ಆಗಿದ್ದು ಕತ್ತಲೆ ಆಗುತ್ತಿದ್ದುದರಿಂದ ಗ್ಯಾಸ್ ಟ್ಯಾಂಕರಿನ ಹಿಂದಿನ ಕಿಂಡಿಯನ್ನು ಬಿಚ್ಚಲು ಸ್ಪ್ಯಾನರ್ ಇಲ್ಲದ ಕಾರಣ ಆಳುಗಳು ಇಲ್ಲದ ಕಾರಣ ಸದರಿ ಎರಡು ವಾಹನಗಳನ್ನು ಮತ್ತು 3 ಜನ ಆರೋಪಿತರುಗಳನ್ನು ವಶಕ್ಕೆ ತೆಗೆದುಕೊಂಡು ಅಬಕಾರಿ ಉಪ ಅಧೀಕ್ಷಕರ ಕಛೇರಿ ಬಿಜಾಪುರಕ್ಕೆ ಕರೆತರಲಾಯಿತು. ಸದರಿ ವಾಹನಗಳನ್ನು ಸಂಬಂಧವಾಗಿ ಪಂಚನಾಮೆಯನ್ನು ಬರೆಯಲು ಸ್ಥಳೀಯ ಜನರನ್ನು ಸಂಪರ್ಕಿಸಲಾಗಿ ಯಾರೂ ಮುಂದೆ ಬಾರದೇ ಇರುವುದರಿಂದ ನಮ್ಮ ಸಿಬ್ಬಂದಿ ಜನರನ್ನೇ ಪಂಚರೆಂದು ಕಾರ್ಯನಿರ್ವಹಿಸಲು ಕೋರಲಾಯಿತು. ಸದರಿ ಟ್ಯಾಂಕರಿನ ಹಿಂದಿನ ನಟ್ಟುಬೋಲ್ಟ್‌ಗಳನ್ನು ಬಿಚ್ಚಿ ಪ್ಲೇಟನ್ನು ತೆಗೆದು ಒಳಗೆ ನೋಡಲಾಗಿ ಅಲ್ಲಿ ಯಾವುದೇ ಗ್ಯಾಸ್ ಇರದೇ ಮದ್ಯದ ಪೆಟ್ಟಿಗೆಗಳನ್ನು ಇಟ್ಟಿರುವುದು ಕಂಡು ಬಂದಿದ್ದು, ಗ್ಯಾಸ್ ಟ್ಯಾಂಕರಿನ ಒಳಗಡೆಯಿಂದ ತಡೆಯಲಾರದಷ್ಟು ಘಾಟು ವಾಸನೆ ಬರುತ್ತಿತ್ತು. ಆಗ ಆಳುಗಳನ್ನು ಹುಡುಕಾಡಿ ಕೆಲವು ಜನರನ್ನು ಕರೆತಂದು ಗ್ಯಾಸ್ ಟ್ಯಾಂಕರನ್ನು ತೋರಿಸಲಾಗಿ ಒಳಗೆ ಲೈಟ್ ಬೆಳಕಿಲ್ಲದ ಕಾರಣ ಮತ್ತು ಘಾಟ್ ವಾಸನೆ ಇದ್ದ ಕಾರಣ ಆಳುಗಳು ಮದ್ಯದ ಪೆಟ್ಟಿಗೆಗಳನ್ನು ಟ್ಯಾಂಕರಿನ ಒಳಗಡೆಯಿಂದ ತೆಗೆಯಲು ಒಪ್ಪಲಿಲ್ಲ. ಸದರಿ ಎರಡು ವಾಹನಗಳನ್ನು ಮತ್ತು 3 ವ್ಯಕ್ತಿಗಳನ್ನು ಕಾವಲು ಕಾಯಲು ನಮ್ಮ ಸಿಬ್ಬಂದಿಯವರನ್ನು ನೇಮಿಸಲಾಯಿತು. ಮರುದಿನ ಮುಂಜಾನೆ ದಿನಾಂಕ: 02.01.2004ರಂದು ಮುಂಜಾನೆ 7.00 ಗಂಟೆಗೆ ಮದ್ಯದ ಪೆಟ್ಟಿಗೆಗಳನ್ನು ಟ್ಯಾಂಕರಿನಿಂದ ಹೊರಗಡೆ ತೆಗೆಯಲಾಗಿ ಈ ಕೆಳಗಿನಂತೆ ಮದ್ಯದ ಪೆಟ್ಟಿಗೆಗಳು ಕಂಡು ಬಂದವು.

1. ಓರಿಜಿನಲ್ ಚಾಯಿಸ್ ವಿಸ್ಕಿ ಲೇಬಲ್ ಹೊಂದಿದ 180ಎಂಎಲ್‌ನ 48 ಬಾಟಲ್‌ಗಳು ಇದ್ದ 465 ಮದ್ಯದ ಪೆಟ್ಟಿಗೆಗಳು ಇದ್ದುವು.
2. ಓಲ್ಡ್ ಮಂಕ್ ತ್ರಿಬಲ್ ಎಕ್ಸ್ ರಮ್ ಲೇಬಲ್ ಹೊಂದಿದ 180 ಎಂಎಲ್‌ದ 48 ಬಾಟಲ್‌ಗಳು ಇದ್ದ 410 ಮದ್ಯದ ಪೆಟ್ಟಿಗೆಗಳು ಇದ್ದವು.

ಹೀಗೆ ಒಟ್ಟು 875 ಮದ್ಯದ ಪೆಟ್ಟಿಗೆಗಳು ಇದ್ದು, ಇವುಗಳಲ್ಲಿ ಒಟ್ಟು ಮದ್ಯವು 7560-00 ಲೀಟರ್ ಇರುವುದು ಕಂಡುಬರುತ್ತದೆ. ಪ್ರತಿಯೊಂದು ಪೆಟ್ಟಿಗೆಯ ಓರಿಜಿನಲ್ ಚಾಯಿಸ್ ವಿಸ್ಕಿಯ ಪೆಟ್ಟಿಗೆಗಳಿಗೆ 1 ರಿಂದ 465 ರವರೆಗೆ ಅನುಕ್ರಮ ನಂಬರ್. ಹಾಗೂ ಓಲ್ಡ್ ಮಂಕ್ ತ್ರಿಬಲ್ ಎಕ್ಸ್ ರಮ್ ಮದ್ಯದ ಪೆಟ್ಟಿಗೆಗಳಿಗೆ 1 ರಿಂದ 410 ರವರೆಗೆ ಅನುಕ್ರಮ ನಂಬರ್ ಕೊಡಲಾಯಿತು. ಓರಿಜಿನಲ್ ಚಾಯಿಸ್ ವಿಸ್ಕಿಯ ಅನುಕ್ರಮ ನಂಬರುಗಳಾದ 1-20-50-100-200-315-305-350-375-400 ಈ ಪೆಟ್ಟಿಗೆಗಳಲ್ಲಿಯ ಪ್ರತಿಯೊಂದು ಪೆಟ್ಟಿಗೆಯಿಂದ 3 ಬಾಟಲಿಗಳನ್ನು ಹೀಗೆ ಒಟ್ಟು 30 ಬಾಟಲಿಗಳನ್ನು ಹಾಗೂ ಓಲ್ಡ್ ಮಂಕ್ ತ್ರಿಬಲ್‌ಎಕ್ಸ್ ರಮ್ ಪೆಟ್ಟಿಗೆಗಳು ಅನುಕ್ರಮ ನಂಬರ್ 1-25-50-100-150-200-250-300-400-410 ಪೆಟ್ಟಿಗೆಗಳಿಂದ ಪ್ರತಿಯೊಂದ ಪೆಟ್ಟಿಗೆಯಿಂದ 3 ಬಾಟಲಿಗಳಂತೆ ಒಟ್ಟು 30 ಬಾಟಲ್‌ಗಳನ್ನು ಹೀಗೆ ಎರಡು ಬ್ರ್ಯಾಂಡಿನಿಂದ ಒಟ್ಟು 60 ಬಾಟಲ್‌ಗಳನ್ನು ರಸಾಯನಿಕ ಪರೀಕ್ಷೆಗಾಗಿ ಪ್ರತ್ಯೇಕವಾಗಿ ಮಾದರಿಗಳನ್ನು ತೆಗೆದು ಕಛೇರಿ ಸೀಲಿನಿಂದ ಸೀಲು ಮಾಡಿ ಪಂಚರ ಹಾಗೂ ನಮ್ಮ ಸಹಿ ಮಾಡಿದ ಚೀಟಿಗಳನ್ನು

ಅಂಟಿಸಲಾಯಿತು. ವಾಹನ ಸಂಖ್ಯೆ: ಕೆಎ:03:ಝಡ್:705 ಟಾಟಾ ಇಂಡಿಕಾ ಕಾರು ಹಾಗೂ ಹೆಚ್.ಆರ್.38: ಬಿಜಿ:3390 ಗ್ಯಾಸ್ ಟ್ಯಾಂಕರ್ ಇವುಗಳನ್ನು ಪಂಚನಾಮೆ ಅಡಿಯಲ್ಲಿ ಜಪ್ತು ಮಾಡಲಾಯಿತು. ನಂತರ 3 ಜನ ಆರೋಪಿತರುಗಳನ್ನು ದಸ್ತಗಿರಿ ಮಾಡಿದೆ. ಮೇಲೆ ಹೇಳಿದ ಮದ್ಯದ ಬಾಟಲ್‌ಗಳನ್ನು ರಸಾಯನಿಕ ಮಾದರಿಗಳನ್ನು ಮತ್ತು ಎರಡು ವಾಹನಗಳನ್ನು ಜಪ್ತು ಮಾಡಲಾಯಿತು. ಹೀಗೆ ಪಂಚನಾಮೆಯನ್ನು ಮುಂಜಾನೆ 7.00 ಗಂಟೆಯಿಂದ ಮಧ್ಯಾಹ್ನ 2.00 ಗಂಟೆಯವರೆಗೆ ಬರೆದು ಮುಗಿಸಲಾಯಿತು. ಹೀಗೆ ಜಪ್ತು ಮಾಡಿದ ಎಲ್ಲ ಮದ್ಯ ಹಾಗೂ ವಾಹನಗಳನ್ನು ಹಾಗೂ ದಸ್ತಗಿರಿ ಮಾಡಿದ ಆರೋಪಿತರುಗಳನ್ನು ಅಬಕಾರಿ ಉಪ ನಿರೀಕ್ಷಕರು ಬಿಜಾಪುರ ಉಪ ವಿಭಾಗ ಇವರ ಮುಂದೆ ಹಾಜರುಪಡಿಸಿ, ಮುಂದಿನ ಕಾನೂನು ಕ್ರಮ ಜರುಗಿಸಲು ಒಪ್ಪಿಸಿದೆನು. ಈಗ ಪಂಚನಾಮೆ ಪ್ರತಿಯನ್ನು ನೋಡುತ್ತಿದ್ದು ಅದನ್ನು ಈಗಾಗಲೇ ನಿಶಾನೆ ಪಿ-2 ಅಂತ ಗುರುತಿಸಲಾಗಿದೆ. ಹಾಗೂ ಅದರ ಮೇಲೆ ಇದ್ದ ನನ್ನ ಸಹಿಯನ್ನು ನಿಶಾನೆ ಪಿ-2 (ಬಿ) ಅಂತ ಗುರುತಿಸಲಾಯಿತು ಸದರಿ ದಿನದಂದು ಜಪ್ತು ಮಾಡಿದ ಇಂಡಿಕಾ ಕಾರು ಹಾಗೂ ಗ್ಯಾಸ್ ಟ್ಯಾಂಕರನ್ನು ನೋಡುತ್ತಿದ್ದು, ಜಪ್ತು ಮಾಡಿದ ವಾಹನಗಳೇ ಇವು ಆಗಿರುತ್ತವೆ. ಈಗಾಗಲೇ ಗ್ಯಾಸ್ ಟ್ಯಾಂಕರನ್ನು ಮುದ್ದೇಮಾಲು ನಂ.1 ಹಾಗೂ ಇಂಡಿಕಾ ಕಾರನ್ನು ಮುದ್ದೇಮಾಲು-2 ಅಂತ ಗುರುತಿಸಲಾಗಿದೆ. ಜಪ್ತು ಮಾಡಿದ ಓರಿಜಿನಲ್ ಚಾಯಿಸ್ ವಿಸ್ಕಿಯ ಬಾಟಲ್‌ಗಳನ್ನು ನೋಡುತ್ತಿದ್ದು, ಹಾಗೂ ಅವುಗಳನ್ನು ಈಗಾಗಲೇ ಮುದ್ದೆಮಲು ನಂ.3 ಜಪ್ತು ಮಾಡಿದ 30 ಓಲ್ಡ್ ಮಂಕ್ ರಮ್ ಮಾದರಿಯ ಬಾಟಲಿಗಳನ್ನು ನೋಡುತ್ತಿದ್ದು ಅವುಗಳನ್ನು ಈಗಾಗಲೇ ಮುದ್ದೆಮಾಲು ನಂ.4 ಅಂತ ಗುರುತಿಸಲಾಗಿದೆ. ಬೆಳಗಾವಿ ವಿಭಾಗ ಜಂಟಿ ಆಯುಕ್ತರು ಹಾಜರಿರುವುದರಿಂದ ಅವರ ಕೆಳಗೆ ಕಾರ್ಯನಿರ್ವಹಿಸುತ್ತಿರುವ ಚಿಕ್ಕೋಡಿ ಉಪವಿಭಾಗ ಅಬಕಾರಿ ಸಿಬ್ಬಂದಿಯವರು ಬೆಳಗಾವಿ ಉಪ ವಿಭಾಗದ ಅಬಕಾರಿ ಸಿಬ್ಬಂದಿಯವರು ಬಿಜಾಪುರ ಉಪ ವಿಭಾಗ ಅಬಕಾರಿ ಸಿಬ್ಬಂದಿಯವರು ಹಾಗೂ ನನ್ನ ಕೆಳಗೆ ಕಾರ್ಯ ನಿರ್ವಹಿಸುವ ಬೆಳಗಾಂವ್ ಸಿಬ್ಬಂದಿಯವರು ಹಾಜರು ಇದ್ದರು ಅಂತ ಸಾಕ್ಷಿ ನುಡಿದಿರುತ್ತಾರೆ. ವಾಹನ ಮಾಲೀಕರಾಗಲೀ ಅಥವಾ ಅವರ ಪರವಾಗಿ ವಕೀಲರಾಗಲೀ ಅಥವಾ ಅರ್ಜಿದಾರರಾಗಲೀ ಈ ದಿನ ಈ ಪ್ರಾಧಿಕಾರದ ಮುಂದೆ ಗೈರು ಹಾಜರು ಇರುವುದರಿಂದ ಪಾಟಿ ಸವಾಲು ಇಲ್ಲವೆಂದು ಪರಿಗಣಿಸಲಾಯಿತು.

ದಿನಾಂಕ: 04.01.2005 ರಂದು ಪ್ರಾ.ಸಾ. -5 ಇವರು ಸಾಕ್ಷಿ ನುಡಿಯುತ್ತಾ, ಇವರು ಈ ಪ್ರಕರಣದಲ್ಲಿ ಪಂಚಸಾಕ್ಷಿ ಅಂತ ಅಧಿಕಾರಿಗಳ ವಿನಂತಿಯ ಮೇರೆಗೆ ಕಾರ್ಯ ನಿರ್ವಹಿಸಿರುತ್ತೇನೆ. ದಿನಾಂಕ: 01.01.2004ರಂದು ನಾನು ಅಬಕಾರಿ ಉಪ ಅಧೀಕ್ಷಕರು ಬಿಜಾಪುರ ಉಪ ವಿಭಾಗದಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ರಾತ್ರಿ ಸುಮಾರು 8.00 ಗಂಟೆಯ ಸುಮಾರಿಗೆ ಅಬಕಾರಿ ಉಪ ಅಧೀಕ್ಷಕರು ಬೆಳಗಾವಿ ಉಪ ವಿಭಾಗ ಬೆಳಗಾವಿ ಇವರು ನನ್ನನ್ನು ಪಂಚನೆಂದು ಕೆಲಸ ನಿರ್ವಹಿಸಲು ಅಬಕಾರಿ ಕಛೇರಿಯಲ್ಲಿ ಕೇಳಿಕೊಂಡರು. ಅವರ ವಿನಂತಿಯ ಮೇರೆಗೆ ನಾನು ಪಂಚನೆಂದು ಕೆಲಸ ನಿರ್ವಹಿಸಿದ್ದು, ರಾತ್ರಿ 8.00 ಗಂಟೆಯ ಸುಮಾರಿಗೆ ಈ ಪ್ರಕರಣದಲ್ಲಿ ಹಿಡಿದ ಗ್ಯಾಸ್ ಟ್ಯಾಂಕರನ್ನು ಮತ್ತು ಇಂಡಿಕಾ ಕಾರನ್ನು ನಮ್ಮ ಕಛೇರಿಯ ಆವರಣದಲ್ಲಿ ತಂದು ನಿಲ್ಲಿಸಿದ್ದರು. ರಾತ್ರಿ ವೇಳೆಯಲ್ಲಿ ಸದರಿ ಟ್ಯಾಂಕರಿನಲ್ಲಿಯ ಹಿಂದಿನ ನಟ್ಟುಬೋಲ್ಟ್‌ಗಳನ್ನು ಬಿಚ್ಚಿ ಪ್ಲೇಟನ್ನು ತೆಗೆದು ನೋಡಲಾಗಿ ಅದರಿಂದ ಘಾಟ್ ವಾಸನೆ ಬಂದಿತು. ಒಳಗಡೆ ಅದರಲ್ಲಿ ಯಾವುದೇ ಗ್ಯಾಸ್ ಇರದೇ ಮದ್ಯದ ಪೆಟ್ಟಿಗೆಗಳು ಕಂಡು ಬಂದವು. ಆಗ ಅವುಗಳನ್ನು ತೆಗೆಯಲು ಆಳುಗಳನ್ನು ಹುಡುಕಾಡಿ ಕೆಲವು ಜನರನ್ನು ಕರೆದುಕೊಂಡು ಬಂದು ಟ್ಯಾಂಕರನ್ನು ತೋರಿಸಲಾಗಿ ಒಳಗೆ ಬೆಳಕು ಇಲ್ಲ ತಾವು ತೆಗೆಯುವುದಿಲ್ಲ ಅಂತ ಹೇಳಿ ಹೊರಟು ಹೋದರು. ಕಾರಣ ಮದ್ಯದ ಪೆಟ್ಟಿಗೆಗಳನ್ನು ಟ್ಯಾಂಕರಿನಿಂದ ರಾತ್ರಿ ವೇಳೆಯಲ್ಲಿ ತೆಗೆಯಲು ಆಗಲಿಲ್ಲ ನಂತರ ಅಧಿಕಾರಿಗಳು ಎರಡು ವಾಹನಗಳನ್ನು ಮತ್ತು ಕರೆದುಕೊಂಡು ಬಂದ 3-ವ್ಯಕ್ತಿಗಳನ್ನು ಕಾಯಲು ಸಿಬ್ಬಂದಿಯವರನ್ನು ನೇಮಿಸಿದರು. ಮರುದಿನ ಮುಂಜಾನೆ ದಿನಾಂಕ: 02.01.2004ರಂದು ಮುಂಜಾನೆ 7.00 ಗಂಟೆಗೆ ಮತ್ತೆ ನಾನು ಅಧಿಕಾರಿಗಳ ಕೋರಿಕೆಯ ಮೇರೆಗೆ ಬಂದಿದ್ದು, ಆಗ ಆಳುಗಳ ಸಹಾಯದಿಂದ ಟ್ಯಾಂಕರಿನಿಂದ ಮದ್ಯದ ಪೆಟ್ಟಿಗೆಗಳನ್ನು ಹೊರಗಡೆ ತೆಗೆಯಿಸಲಾಗಿ ಒಟ್ಟು ಓರಿಜಿನಲ್ ಚಾಯಿಸ್ ವಿಸ್ಕಿ ಅಂತ ಬರೆದ 180 ಎಂಎಲ್‌ದ 48 ಬಾಟಲ್‌ಗಳು ಇದ್ದ ಒಟ್ಟು 465 ಪೆಟ್ಟಿಗೆಗಳು ಇದ್ದವು. ಮತ್ತು ಓಲ್ಡ್ ಮಂಕ್ ತ್ರಿಬಲ್‌ಎಕ್ಸ್ ರಮ್ ಎಂದು ಬರೆದ 180 ಎಂಎಲ್‌ದ 48 ಬಾಟಲ್‌ಗಳು ಇದ್ದ 410 ರಟ್ಟಿನ ಪೆಟ್ಟಿಗೆಗಳು ಹೀಗೆ ಒಟ್ಟು 875 ಮದ್ಯದ ರಟ್ಟಿನ ಪೆಟ್ಟಿಗೆಗಳು ಇದ್ದವು ನಂತರ ಅಧಿಕಾರಿಗಳು ಸದರಿ ಪೆಟ್ಟಿಗೆಗಳ ಮೇಲೆ ಅನುಕ್ರಮವಾಗಿ ನಂಬರ್‌ಗಳನ್ನು ನೀಡಿದರು. ನಮ್ಮ ಸಮಕ್ಷಮದಲ್ಲಿ ಓರಿಜಿನಲ್ ಚಾಯಿಸ್ ವಿಸ್ಕಿಯ ಕೆಲವು ಪೆಟ್ಟಿಗೆಗಳಿಂದ ಒಟ್ಟು 30 ಬಾಟಲ್‌ಗಳನ್ನು ಅಂದರೆ ಪ್ರತಿಯೊಂದು ಪೆಟ್ಟಿಗೆಯಿಂದ 3 ಬಾಟಲ್‌ಗಳಂತೆ ಅದೇ ರೀತಿ ಓಲ್ಡ್ ಮಂಕ್ ರಮ್ ಪೆಟ್ಟಿಗೆಗಳಿಂದ 3 ಬಾಟಲ್‌ಗಳಂತೆ ಒಟ್ಟು 60 ಬಾಟಲ್‌ಗಳನ್ನು ರಸಾಯನಿಕ ಪರೀಕ್ಷೆಗಾಗಿ ಪ್ರತ್ಯೇಕವಾಗಿ ತೆಗೆದಿರಿಸಿ, ಕಛೇರಿಯ ಸೀಲು ಮಾಡಿ ನಮ್ಮ ಹಾಗೂ ಅಧಿಕಾರಿಗಳ ಸಹಿ ಮಾಡಿದ ಚೀಟಿಗಳನ್ನು ಅಂಟಿಸಿದರು. ಉಳಿದ ಮದ್ಯದ ಪೆಟ್ಟಿಗೆಗಳನ್ನು ಇಂಡಿಕಾ ಕಾರು ನಂ.ಕೆಎ:03:ಝಡ್:705 ಹಾಗೂ ಗ್ಯಾಸ್ ಟ್ಯಾಂಕರ್ ನಂ.ಹೆಚ್.ಆರ್.38: ಬಿಜಿ:3390 ಗಳನ್ನು ಜಪ್ತು ಮಾಡಿ, ಸವಿಸ್ತಾರವಾಗಿ ಪಂಚನಾಮೆಯನ್ನು ಬರೆದು ನಮ್ಮ ಸಹಿಯನ್ನು ತೆಗೆದುಕೊಂಡರು. ಈಗ ಸದರಿ ಜಪ್ತು ಪಂಚನಾಮೆಯ ಪ್ರತಿಯನ್ನು ನೋಡುತ್ತಿದ್ದು, ಅದನ್ನು ಈಗಾಗಲೇ ನಿಶಾನೆ ಪಿ-2 ಅಂತ ಗುರುತಿಸಿದ್ದು, ಅದರ ಮೇಲಿರುವ ನನ್ನ ಸಹಿಯನ್ನು ನಿಶಾನೆ ಪಿ-2(ಸಿ) ಅಂತ ಗುರುತಿಸಲಾಯಿತು. ಸದರಿ ಜಪ್ತು ಮಾಡಿದ ಇಂಡಿಕಾ ಕಾರನ್ನು ಮತ್ತು ಗ್ಯಾಸ ಟ್ಯಾಂಕರನ್ನು ಈಗ ನೋಡುತ್ತಿದ್ದು ಅವುಗಳನ್ನು ಈಗಾಗಲೇ ಮುದ್ದೇಮಾಲು ನಂ.1 ಮತ್ತು ಮುದ್ದೇಮಾಲು ನಂ.2 ಅಂತ ಗುರುತಿಸಲಾಗಿದೆ. ಜಪ್ತು ಮಾಡಿದ ಸ್ಯಾಂಪಲ್ ಓರಿಜಿನಲ್ ಚಾಯಿಸ್ ವಿಸ್ಕಿ ಹಾಗೂ ಓಲ್ಡ್ ಮಂಕ್ ರಮ್ ಸ್ಯಾಂಪಲ್ ಬಾಟಲಿಗಳನ್ನು ಈಗ ನೋಡುತ್ತಿದ್ದು ಅವುಗಳನ್ನು ಈಗಾಗಲೇ ಮುದ್ದೇಮಾಲು ನಂ.3 ಮತ್ತು 4 ಅಂತ ಗುರುತಿಸಲಾಗಿದೆ. ಅಂತ ಸಾಕ್ಷಿ ನುಡಿದಿರುತ್ತಾರೆ. ಈ ದಿವಸ ಈ ನ್ಯಾಯಾಲಯದಲ್ಲಿ ವಾಹನಗಳ ಮಾಲೀಕರಾಗಲಿ ಅಥವಾ ಅವರ ಪರ ವಕೀಲರಾಗಲಿ ಈ ಪ್ರಾಧಿಕಾರದ ಮುಂದೆ ಗೈರು ಹಾಜರು ಇರುವ ಕಾರಣ ಪಾಟಿ ಸವಾಲು ಇಲ್ಲವೆಂದು ಪರಿಗಣಿಸಲಾಯಿತು.

ಸಹಾಯಕ ಅಭಿಯೋಗ ನಿರ್ದೇಶಕರು ತಮ್ಮ ಸಾಕ್ಷಿದಾರರ ಹೇಳಿಕೆಗಳನ್ನು ಮುಕ್ತಾಯಗೊಳಿಸಲಾಯಿತು ಎಂದು ತಿಳಿಸಿದರು. ನಂತರ ಪ್ರಕರಣವನ್ನು ವಾದ-ವಿವಾದಕ್ಕೆ ಮಂಡಿಸಲಾಯಿತು. ಪ್ರಾಸಿಕ್ಯೂಶನ್ ಪರವಾಗಿ ಸಹಾಯಕ ಅಭಿಯೋಗ ನಿರ್ದೇಶಕರು ತಮ್ಮ ವಾದವನ್ನು ಮಂಡಿಸಿದರು. ಆ ಸಮಯದಲ್ಲಿ ವಾಹನಗಳ ಮಾಲೀಕರಾಗಲಿ ಅಥವಾ ಅವರ ಪರ ವಕೀಲರಾಗಲಿ ಗೈರು ಹಾಜರು ಇರುವುದರಿಂದ ಅವರ ಹೇಳಿಕೆಯು ಏನು ಇಲ್ಲವೆಂದು ಪರಿಗಣಿಸಲಾಯಿತು.

ಅಬಕಾರಿ ಉಪ ನಿರೀಕ್ಷಕರು ಜಾರಿ ಮತ್ತು ತನಿಖೆ ಬಿಜಾಪುರ ಇವರು ಈ ಪ್ರಾಧಿಕಾರಕ್ಕೆ ವರದಿಯನ್ನು ಸಲ್ಲಿಸಿ, ರಸಾಯನಿಕ ತಜ್ಞರು ಜಪ್ತು ಮಾಡಿದ ಮದ್ಯದಲ್ಲಿ ಮದ್ಯಸಾರದ ಅಂಶವು ಇರುತ್ತದೆ ಎಂದು ದೃಢಪಡಿಸಿರುತ್ತಾರೆ. ವಾಹನಗಳನ್ನು ಜಪ್ತು ಮಾಡಿ ಕೆಲವು ತಿಂಗಳು ಕಳೆದರೂ ತನ್ನದೆಂದು ಯಾರು ಮುಂದೆ ಬಂದಿರುವುದಿಲ್ಲ. ಆದರೆ ತಾತ್ಕಾಲಿಕವಾಗಿ ಟಾಟಾ ಇಂಡಿಕಾ ಕಾರು ನಂ.ಕೆಎ-03:ಝಡ್:705ನ್ನು ಮಾತ್ರ ಬಿಡುಗಡೆ ಮಾಡಿಕೊಳ್ಳುವದಕ್ಕೊಸ್ಕರ ಅರ್ಜಿಯನ್ನು ಸಲ್ಲಿಸಿರುತ್ತಾರೆ. ವಾಹನಗಳನ್ನು ಕಛೇರಿಯ ಆವರಣದಲ್ಲಿ ನಿಲ್ಲಿಸಿರುವುದರಿಂದ ವಾತಾವರಣದ ವೈಪರೀತ್ಯದಿಂದ ತನ್ನ ಮೌಲ್ಯವನ್ನು ಕಳೆದುಕೊಳ್ಳುವ ಸಾಧ್ಯತೆಗಳು ಇರುತ್ತದೆ. ಆದ ಕಾರಣ ಸರ್ಕಾರದ ಆದಾಯದ ಹಿತದೃಷ್ಟಿಯಿಂದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಉಚಿತವೆಂದು ವಿನಂತಿಸಿರುತ್ತಾರೆ.

ಪ್ರಾಸಿಕ್ಯೂಶನ್ ಪರ ಸಾಕ್ಷಿ ಹಾಗೂ ಎ.ಡಿ.ಪಿ. ರವರ ವಾದದ ಆಧಾರದ ಮೇಲೆ ಮುಂದಿನ ಆದೇಶ ಹೊರಡಿಸುವ ಮುನ್ನ ಕೆಳಕಂಡ ವಿವಾದಾಂಶಗಳಿಗೆ ಉತ್ತರವನ್ನು ಪಡೆಯಬೇಕಾಗಿರುತ್ತದೆ.

**ಮೊದಲನೆಯ ವಿವಾದಾಂಶ**

ದಿನಾಂಕ: 02.01.2004ರಂದು ಸದರಿ ಟ್ಯಾಂಕರಿನಲ್ಲಿ ಅಕ್ರಮವಾಗಿ ಮದ್ಯದ ಪೆಟ್ಟಿಗೆಗಳು ಸಾಗಾಣಿಕೆಯಾಗಿದೆಯೇ ಮತ್ತು ಟಾಟಾ ಇಂಡಿಕಾ ಕಾರು ಈ ಅಪರಾಧಕ್ಕೆ ಭಾಗಿಯಾಗಿರುತ್ತದೆಯೇ? ಇದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 32, 34 ರೀತ್ಯಾ ಅಪರಾಧವಾಗಿದೆಯೇ? ಅಥವಾ ಇಲ್ಲಾ?

**ಎರಡನೆಯ ವಿವಾದಾಂಶ**

ಸದರಿ ವಾಹನದಲ್ಲಿ ಅಕ್ರಮ ಮದ್ಯದ ಪೆಟ್ಟಿಗೆಗಳು ಸಾಗಾಣಿಕೆಯಾಗಿರುವ ಬಗ್ಗೆ ತನ್ನ ತಿಳುವಳಿಕೆಗೆ ಬಾರದೇ ಅಥವಾ ತಾನು ಶಾಮೀಲಾಗದೇ ನಡೆದಿದೆ ಎಂಬುದರ ಬಗ್ಗೆ ಅರ್ಜಿದಾರನಾಗಲಿ ಅಥವಾ ವಾಹನ ಚಾಲಕರಾಗಲಿ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ? ಅಥವಾ ಇಲ್ಲಾ?

**ಮೂರನೆಯ ವಿವಾದಾಂಶ**

ವಾಹನಗಳು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಿಕ್ಕೆ ಯೋಗ್ಯವಾಗಿದೆಯೇ? ಅಥವಾ ಇಲ್ಲಾ?

**ಮೊದಲನೆಯ ವಿವಾದಾಂಶಕ್ಕೆ ಉತ್ತರ ಸಕಾರಾತ್ಮಕ (ಹೌದು)**

ಪ್ರಾಸಿಕ್ಯೂಶನ್ ಸಾಕ್ಷಿ ನುಡಿದ ಪಿರ್ಯಾಧಿದಾರರು ನೀಡಿರುವ ಹೇಳಿಕೆಯನ್ನು ಗಮನಿಸಿದಾಗ ಮಹಜರದಲ್ಲಿ ಇರುವ ಅಂಶಗಳನ್ನು ಪ್ರಬಲವಾಗಿ ಸಮರ್ಥಿಸುತ್ತಾರೆ. ಪಂಚರು ಹಾಗೂ ಇತರ ಸಾಕ್ಷಿದಾರರು ಸಾಕ್ಷಿಯು ಕೂಡಾ ಪಿರ್ಯಾಧಿಯ ಸಾಕ್ಷಿಗೆ ಪೂರಕವಾಗಿದೆ. ಪ್ರಕರಣದಲ್ಲಿ ಪಿರ್ಯಾಧಿದಾರರು ಒಂದು ಗ್ಯಾಸ್ ಟ್ಯಾಂಕರ್ ನಂ.ಹೆಚ್.ಆರ್. 38: ಬಿಜಿ:3390 (ಟಾಟಾ ಕಂಪನಿಯ ವಾಹನ) ಛಾಸ್ಸಿ ನಂ. 41005ಬಿಝಡ್‌ಝಡ್ 205076 ಇಂಜಿನ್ ನಂಬರ್:81040012 ತಡೆದು 875 ಪೆಟ್ಟಿಗೆಗಳಲ್ಲಿ ಇರಿಸಿದ 180 ಎಂಎಲ್‌ದ 42000 ಮದ್ಯ ತುಂಬಿದ ಬಾಟಲ್‌ಗಳನ್ನು ವಶಪಡಿಸಿಕೊಂಡಿರುತ್ತಾರೆ. ಈ ವಾಹನದ ಮುಂದುಗಡೆ ಪೈಲಟ್ ಆಗಿ ಚಲಿಸುತ್ತಿದ್ದ ಇಂಡಿಕಾ ಕಾರು ನಂಬರ್ ಕೆಎ:03:ಝಡ್:705ನ್ನು ವಶಪಡಿಸಿಕೊಂಡಿರುತ್ತಾರೆ. ಪ್ರಾ.ಸಾ. -3 ಇವರ ಸಾಕ್ಷಿಯಲ್ಲಿ ರಸಾಯನಿಕ ತಜ್ಞರ ಮಾದರಿಗಳನ್ನು ಪರಿಶೀಲಿಸಿ ಜಪ್ತು ಮಾಡಿದ ಮದ್ಯದಲ್ಲಿ ಮದ್ಯಸಾರದ ಅಂಶ ಇರುವುದನ್ನು ದೃಢಪಡಿಸಿರುತ್ತಾರೆ ಎಂದು ನುಡಿದಿರುತ್ತಾರೆ. ಕರ್ನಾಟಕ ಅಬಕಾರಿ ಕಾಯ್ದೆ 1965 ಕಲಂ 43(ಬಿ) ಪ್ರಕಾರ ಜಪ್ತುಪಡಿಸಿದ ವಾಹನಗಳ ಮಾಲಿಕರುಗಳಿಗೆ ನೋಟೀಸುಗಳನ್ನು ಹೊರಡಿಸಿ ಕರ್ನಾಟಕ ಸರ್ಕಾರದ ರಾಜ್ಯಪತ್ರ ಗುರುವಾರ ಫೆಬ್ರವರಿ 26.2004ರಂದು ಭಾಗ-3 ಪೇಜ್ ನಂಬರ್ 291ರಲ್ಲಿ ಪ್ರಕಟಣೆಗೊಳಿಸಲಾಗಿರುತ್ತದೆ. ಪ್ರಕರಣದಲ್ಲಿ ಲಭ್ಯವಿರುವ ದಾಖಲೆಗಳನ್ನು ಹಾಗೂ ಪ್ರಾಸಿಕ್ಯೂಶನ್ ಸಾಕ್ಷಿಗಳನ್ನು ಅವಲೋಕಿಸಲಾಗಿ ಜಪ್ತು ಮಾಡಿದ ವಾಹನಕ್ಕೆ ಇರುವ ನೊಂದಣಿ ಫಲಕ ಜಪ್ತು ಮಾಡಿದ ವಾಹನಕ್ಕೆ ಸಂಬಂಧಿಸಿದ್ದು ಇರುವುದಿಲ್ಲ. ಸದರಿ ಫಲಕ ಸುಳ್ಳು ನೋಂದಣೆ ಫಲಕವಾಗಿರುತ್ತದೆ. ಕಾರಣ ಹೆಚ್.ಆರ್. 38: ಬಿಜಿ:3390 ವಾಹನಕ್ಕೆ ಸಂಬಂಧಿಸಿದಂತೆ ಹೆಚ್‌ಜಿವಿ:3516 ಛಾಸ್ಸಿ ನಂಬರ್ 361041 ಕೆಟಿಕ್ಯೂ 737418 ಮತ್ತು ಇಂಜಿನ್ ನಂಬರ್ 697702 ಕೆಟಿಕ್ಯೂ 820961 ವಾಹನಕ್ಕೆ ಸಂಬಂಧಿಸಿದ್ದು ಇರುತ್ತದೆ. ಈ ಕಾರಣಗಳಿಂದ ಜಪ್ತು ಮಾಡಿದ ವಾಹನಕ್ಕೆ ನಿಜವಾದ ನೋಂದಣೆ ಫಲಕ ಇರುವುದಿಲ್ಲ. ಮತ್ತು ಜಪ್ತು ಮಾಡಿದ ವಾಹನಕ್ಕೆ ಸಂಬಂಧಿಸಿದಂತೆ ಸುಳ್ಳು ನೋಂದಣೆ ನಂಬರ್ ಆಗಿರುತ್ತದೆ. ಈ ಕಾರಣಗಳಿಂದ ಈ ಪ್ರಕರಣದಲ್ಲಿ ಜಪ್ತು ಮಾಡಿದ ಹೇವಿಗೂಡ್ಸ್ ವೆಹಿಕಲ್ 3516 ಟಾಟಾ ಕಂಪನಿಯು ತಯಾರಿಸಿದ ವಾಹನಕ್ಕೆ ಗ್ಯಾಸ್ ಟ್ಯಾಂಕರ್ ಜೋಡಿಸಿರುವುದು ಇರುತ್ತದೆ. ಟಾಟಾ ಇಂಡಿಕಾ ಕಾರು ಕೆಎ:03:ಝಡ್:705 ವಾಹನದಲ್ಲಿ ನಾಗಪ್ಪ ಭೀಮಪ್ಪ ಜುಮನಾಳ ಮತ್ತು ಅಮರಯ್ಯ ಮಾಳಯ್ಯ ಹಿರೇಮಠ ಎಂಬುವವರು ಇದ್ದು ಇವರುಗಳು ಫಿರ್ಯಾಧಿದಾರರು ವಿಚಾರಿಸಿದ ವಿಚಾರಣೆಯ ಸಮಯದಲ್ಲಿ ನಾವುಗಳು ಕೆ.ಎಂ. ನಾಗರಾಜ ಸಾ: ಹೊಸಪೇಟೆ ಇವರುಗಳು ತಿಳಿಸಿದ ಮೇರೆಗೆ ಬಂದಿದ್ದು ಮತ್ತು ಗ್ಯಾಸ್ ಟ್ಯಾಂಕರ್ ನಂ.ಹೆಚ್.ಆರ್. 38:ಬಿಜಿ:3390ರಲ್ಲಿ ಅಕ್ರಮ ಮದ್ಯವನ್ನು ಸಾಗಾಣಿಕೆ ಮಾಡುವುದರ ಸಲುವಾಗಿ ನಮ್ಮನ್ನು ಸದರಿ ಟ್ಯಾಂಕರ್ ಮುಂಗಾವಲಾಗಿ ಹೋಗಿ ಯಾರಾದರೂ ಅಬಕಾರಿ- ಪೊಲೀಸ್ ಅಧಿಕಾರಿಗಳು ರಸ್ತೆಯ ಮೇಲೆ ಇಲ್ಲದ ಸಮಯ ನೋಡಿ ಕ್ಷೇಮವಾಗಿ ಹೊಸಪೇಟೆಗೆ ತರಲು ತಿಳಿಸಿರುತ್ತಾರೆ ಎಂದು ತಿಳಿಸಿದ ಪ್ರಯುಕ್ತ ಸದರಿ ಕಾರು ಸದರಿ ಟ್ಯಾಂಕರಿಗೆ ಮುಂಗಾವಲಾಗಿ ಅಕ್ರಮವಾಗಿ ಮದ್ಯ ಸಾಗಾಣಿಕೆಗೆ ಸಹಕರಿಸಿರುತ್ತಾರೆ ಎಂಬುದು ವಿಚಾರಣೆಯ ಸಮಯದಲ್ಲಿ ದೃಢಪಟ್ಟಿರುತ್ತದೆ.

ಯಾರೇ ಆಗಲಿ ನಿಗದಿತ ಪ್ರಮಾಣಕ್ಕಿಂತ ಹೆಚ್ಚಿನ ಮದ್ಯವನ್ನು ಹೊಂದಲು ಮತ್ತು ಸಾಗಾಣಿಕೆ ಮಾಡಲು ಕರ್ನಾಟಕ ಅಬಕಾರಿ ನಿಯಮಗಳು (ಪೊಜಿಶನ್ ಟ್ರಾನ್ಸ್‌ಪೋರ್ಟ್ ಮತ್ತು ಇಂಪೋರ್ಟ್) 1967ರ ಅಡಿಯಲ್ಲಿ ಅಧೀಕೃತ ರಹದಾರಿ ಪತ್ರವನ್ನು ಪಡೆದು ಸಾಗಾಣಿಕೆ ಮಾಡಲು ಅವಕಾಶ ಇರುತ್ತದೆ. ರಹದಾರಿ ಪತ್ರವಿಲ್ಲದೇ ಮದ್ಯವನ್ನು ಸಾಗಾಣಿಕೆ ಮಾಡುವುದು ಮತ್ತು ಅದಕ್ಕೆ ಸಹಕಾರ ನೀಡುವುದು ಅಪರಾಧವಾಗಿರುತ್ತದೆ. ಮತ್ತು ಸರ್ಕಾರದ ರಾಜಸ್ವಕ್ಕೆ ಧಕ್ಕೆ ತರುವಂತಹದು ಆಗಿರುತ್ತದೆ. ಹೇವಿ ಗೂಡ್ಸ್ ವೈಕಲ್ 3516ಕ್ಕೆ ಗ್ಯಾಸ್ ಟ್ಯಾಂಕರನ್ನು ಅಳವಡಿಸಿ 875 ಮದ್ಯದ ಪೆಟ್ಟಿಗೆಗಳನ್ನು ಸದರಿ ಟ್ಯಾಂಕರ್‌ನಲ್ಲಿ ಇರಿಸಿ ಮೇಲ್ನೋಟಕ್ಕೆ ಜನರಿಗೆ ಜನಬಳಕೆಗೆ ಬೇಕಾಗುವ ಗ್ಯಾಸ್ ಸಾಗಾಣಿಕೆ ಎಂದು ತಿಳಿಯಬಹುದೆಂದು ಇದನ್ನು ದುರಪಯೋಗ ಪಡಿಸಿಕೊಂಡು ಇಂಡಿಕಾ ಕಾರು ಸಂಖ್ಯೆ: ಕೆಎ:03:ಝಡ್:705ನ್ನು ಪೈಲಟ್ ಗಾಡಿಯಾಗಿ ಉಪಯೋಗಿಸಿಕೊಂಡು ಇಷ್ಟು ಬೃಹತ್ ಪ್ರಮಾಣದ ಮದ್ಯವನ್ನು ಅಕ್ರಮವಾಗಿ ರಹದಾರಿ ಪತ್ರವಿಲ್ಲದೆ ಮದ್ಯವನ್ನು ಸಾಗಾಣಿಕೆಯಾಗಿರುವುದು ಸ್ಪಷ್ಟವಾಗಿ ಸಾಬೀತವಾಗಿದೆ. ಸದರಿ ವಾಹನದಲ್ಲಿ ಮದ್ಯ ಸಾಗಿಸಿದ ಬಗ್ಗೆ ಎದುರುದಾರರಿಂದ ಯಾವುದೇ ರೀತಿಯ ಅಭ್ಯಂತರ ವ್ಯಕ್ತವಾಗಿರುವುದಿಲ್ಲ.

**ಎರಡನೆಯ ವಿವಾದಾಂಶಕ್ಕೆ ಉತ್ತರ ಇಲ್ಲ**

ಮೊದಲನೆಯ ವಿವಾದಾಂಶದಿಂದ ಪಡೆದ ಉತ್ತರದಲ್ಲಿ ಸದರಿ ಟ್ಯಾಂಕರಿನಲ್ಲಿ ಅಕ್ರಮವಾಗಿ ಮದ್ಯ ಸಾಗಾಣಿಕೆಯಾಗಿರುವುದು. ಮತ್ತು ಅದಕ್ಕೆ ಅಂದರೆ ಸದರಿ ಟ್ಯಾಂಕರಿಗೆ ಟಾಟಾ ಇಂಡಿಕಾ ಕಾರು ಮುಂಗಾವಲುವಾಗಿ ಕಾರ್ಯನಿರ್ವಹಿಸಿದ್ದು ಸ್ಪಷ್ಟವಾಗಿ ಸಾಬೀತಾಗಿದ್ದು, ಪ್ರಕರಣವು ಸಂಭವಿಸಿದ ಸಮಯದಲ್ಲಿ ಆರೋಪಿಗಳು ವಾಹನಗಳ ಚಾಲಕರುಗಳ ತಿಳುವಳಿಕೆಯಿಂದ ಹಾಗೂ ಇವರ ಶಾಮೀಲಿನಿಂದಲೇ ಸದರಿ ಟ್ಯಾಂಕರ್‌ನಲ್ಲಿ ಅಕ್ರಮ ಮದ್ಯ ಸಾಗಾಣಿಕೆಯಾಗಿರುವುದು ಮತ್ತು ಸದರಿ ಟ್ಯಾಂಕರಿಗೆ ಟಾಟಾ ಇಂಡಿಕಾ ಕಾರು ಮುಂಗಾವಲಾಗಿ ಕಾರ್ಯನಿರ್ವಹಿಸಿದ್ದು ಸ್ಪಷ್ಟವಾಗಿ ರುಜುವಾತು ಆಗಿದ್ದು ಇದರ ಬಗ್ಗೆ ವಾಹನಗಳ ಮಾಲೀಕರಿಗೂ ಸಹ ತಿಳುವಳಿಕೆ ಇದ್ದಿತೆಂಬುದು ತಿಳಿದು ಬರುತ್ತದೆ. ವಾಹನಗಳ ಮಾಲೀಕರು ಹಾಗೂ ಚಾಲಕರು ತಿಳುವಳಿಕೆಯಿಂದಲೇ ಗ್ಯಾಸ್ ಟ್ಯಾಂಕರ್‌ನಲ್ಲಿ ಅಕ್ರಮವಾಗಿ ಮದ್ಯ ಸಾಗಾಣಿಕೆಯಾಗಿರುತ್ತದೆ ಮತ್ತು ಟಾಟಾ ಇಂಡಿಕಾ ಕಾರು ಸದರಿ ಟ್ಯಾಂಕರಿಗೆ ಮುಂಗಾವಲಾಗಿ ಕಾರ್ಯನಿರ್ವಹಿಸಿರುತ್ತದೆ ಎಂಬುದು ಸಂದೇಹಾತೀತವಾಗಿ ರುಜುವಾತುವಾಗಿದೆ. ಇದನ್ನು ಅಲ್ಲಗಳೆಯಲು ಅರ್ಜಿದಾರರು ತನ್ನ ಪರ ಯಾವುದೇ ಸಾಕ್ಷ್ಯಾಧಾರಗಳನ್ನು ನೀಡಿರುವುದಿಲ್ಲ.

ನಿಯಮ 43(ಬಿ) (2) ರನ್ವಯ ಸ್ವತಃ ವಾಹನದ ಮಾಲೀಕ ಅಥವಾ ಅವರ ಪ್ರತಿನಿಧಿ ಮತ್ತು ವಾಹನ ಯಾರ ವಶದಲ್ಲಿತ್ತೋ ಆತನು ವಿವರಗಳು ವಾಹನದಲ್ಲಿ ಮದ್ಯ ಅಥವಾ ಅಮಲಿನ ಪದಾರ್ಥ ಸಾಗಾಣಿಕೆಯಾಗಿರುವುದರ ಬಗ್ಗೆ ತಮ್ಮಗಳ ಗಮನಕ್ಕೆ ಬಾರದೇ ಅಥವಾ ಶಾಮೀಲಾಗದೇ

ಈ ಕೃತ್ಯವು ಸಂಭವಿಸಿದೆ. ಮತ್ತು ಇಂತಹ ಉಪಯೋಗದ ವಿರುದ್ಧ ತಾವು ಪ್ರತಿಯೊಬ್ಬರು ಎಲ್ಲ ರೀತಿಯ ಸಕಾರಣವಾದ ಮತ್ತು ಅಗತ್ಯವಾದ ಮಂಜೂರಾತಿಯನ್ನು ತೆಗೆದುಕೊಂಡಿರುವುದರ ಬಗ್ಗೆ ಪ್ರಾಧಿಕೃತ ಅಧಿಕಾರಿಗಳಿಗೆ ತೃಪ್ತಿಕರವಾಗಿ ಸಾಭೀತು ಪಡಿಸಬೇಕಾಗಿರುತ್ತದೆ. ಆದರೆ ವಾಹನ ಮಾಲೀಕರು ತಮ್ಮ ಹೇಳಿಕೆಯಿಂದಾಗಲೀ ಅಥವಾ ಸಾಕ್ಷ್ಯಾಧಾರಗಳಿಂದಾಗಲೀ ತಮ್ಮ ಹೊಣೆಗಾರಿಕೆಯನ್ನು ಈ ಪ್ರಾಧಿಕಾರಕ್ಕೆ ತೃಪ್ತಿಕರವಾಗಿ ಸಾಭೀತು ಪಡಿಸಿರುವುದಿಲ್ಲ.

**ಮೂರನೇ ವಿವಾದಾಂಶಕ್ಕೆ ಉತ್ತರ ಹೌದು**

ಮೂರನೇ ಮತ್ತು ಎರಡನೇಯ ವಿವಾದಾಂಶದಿಂದ ಪಡೆದ ಉತ್ತರದಿಂದ ಪ್ರಕರಣದಲ್ಲಿ ಜಪ್ತು ಮಾಡಲ್ಪಟ್ಟ ವಾಹನಗಳು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿ ಕಂಡುಬಂದಿರುವುದರಿಂದ ಈ ಕೆಳಕಂಡಂತೆ ಆದೇಶ.

**ಆದೇಶ**

ಶ್ರೀ ಕೆ.ಆರ್. ಗೌಡ್ರ, ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು ಇ.ಐ.ಬಿ. ಬಿಜಾಪುರ ಜಿಲ್ಲೆ, ಬಿಜಾಪುರ ಆದ ನಾನು, ಕರ್ನಾಟಕ ಅಬಕಾರಿ ಅಧಿನಿಯಮ 1965ರ ನಿಯಮ 43(ಎ) ನಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ನಿಯಮ 43(ಬಿ) ದಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ, ನಂತರ ನಿಯಮ 43(ಎ) 2ರನ್ವಯ ಅಬಕಾರಿ ಉಪ ನಿರೀಕ್ಷಕರು ಬಿಜಾಪುರ ಉಪವಿಭಾಗ, ಬಿಜಾಪುರ ಇವರ ಗುನ್ಹೆ ನಂಬರ್: 33/ 2003-04ರಲ್ಲಿ ಜಪ್ತು ಮಾಡಲ್ಪಟ್ಟ ವಾಹನಗಳ ನಂಬರ್: ಕೆಎ:05:ಝಡ್:705 (ಟಾಟಾ ಇಂಡಿಕಾ ಕಾರು) ಮತ್ತು ಗ್ಯಾಸ್ ಟ್ಯಾಂಕರ್ ನಂ. ಹೆಚ್.ಆರ್. 38: ಬಿಜಿ:3390 ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿದ್ದೇನೆ.

ಪ್ರಾಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಬಿಜಾಪುರ ಜಿಲ್ಲೆ, ಬಿಜಾಪುರ ಇವರ ಆದೇಶ ಸಂಖ್ಯೆ: ಇಎಕ್ಸ್‌ಇ: ಬಿಜೆಪಿ: ಡಿಟಿಸಿಆರ್: 111:2003-04, ದಿನಾಂಕ: 19.03.2004ರಂದು ಸದರಿ ಪ್ರಕರಣದಲ್ಲಿ ಜಪ್ತಾದ ಮದ್ಯ ತುಂಬಿದ 180 ಮಿಲಿಯ 42000 ಬಾಟಲಿಗಳನ್ನು ಅಂದರೆ ಒಟ್ಟು 7560.000 ಲೀಟರ್ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುವುದನ್ನು ದೃಢಪಡಿಸಿರುತ್ತೇನೆ.

ಈ ಪ್ರಕರಣದಲ್ಲಿ ಬಂಧಿಸಲ್ಪಟ್ಟ ಎಲ್ಲ ಆರೋಪಿತರ ವಿರುದ್ಧ ಮಾನ್ಯ ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿ ದೋಷಾರೋಪಣಾ ಪತ್ರವನ್ನು ಸಲ್ಲಿಸಲು ಆದೇಶಿಸಿದೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 25.01.2006 ರಂದು ಶೀಘ್ರಲಿಪಿಗಾರರಿಗೆ ಉಕ್ತ ಲೇಖನ ಕೊಟ್ಟು ಗಣಕ ಯಂತ್ರದಲ್ಲಿ ಬೆರಳಚ್ಚು ಮಾಡಿದ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಅಮಲಿನಲ್ಲಿ ಬರುವುದು.

**ಕೆ.ಆರ್. ಗೌಡ್ರ**
ಪ್ರಾಧೀಕೃತ ಅಧಿಕಾರಿ ಹಾಗೂ
ಅಬಕಾರಿ ಅಧೀಕ್ಷಕರು ಇ.ಐ.ಬಿ.
ಬಿಜಾಪುರ ಜಿಲ್ಲೆ, ಬಿಜಾಪುರ.

**ಅನುಬಂಧ-1**

**ಪಿರ್ಯಾಧಿದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ**

| | | |
|---|---|---|
| ಪ್ರಾ.ಸಾ-1 | ಹನುಮಂತರಾವ್ ತಂದೆ: ಗುಂಡುರಾವ್ ಕುಲಕರ್ಣಿ<br>ಅಬಕಾರಿ ಉಪ ನಿರೀಕ್ಷಕರು ಬಿಜಾಪುರ ಉಪವಿಭಾಗ (ನಿವೃತ್ತಿ) | ಪಿರ್ಯಾಧಿದಾರರು |
| ಪ್ರಾ.ಸಾ-2 | ಶಿವಸಾಲಿ ವೀರಭದ್ರಪ್ಪ<br>ಅಬಕಾರಿ ನಿರೀಕ್ಷಕರು ಚಿಕ್ಕೋಡಿ ಉಪ ವಿಭಾಗ. | ಪಂಚರು |
| ಪ್ರಾ.ಸಾ-3 | ಮಲ್ಲಪ್ಪ ತಂದಿ ಭೀಮಪ್ಪ ಹಳ್ಳದಮನಿ, ಅಬಕಾರಿ ಉಪ ನಿರೀಕ್ಷಕರು<br>ಬಿಜಾಪುರ ನಗರ ಉಪವಲಯ | ತನಿಖಾಧಿಕಾರಿಗಳು |
| ಪ್ರಾ.ಸಾ-4 | ತಮ್ಮಣ್ಣ ಸಾತ್ತಪ್ಪ ಮೇತ್ರಿ<br>ಅಬಕಾರಿ ಉಪ ಅಧೀಕ್ಷಕರು ಬೆಳಗಾಂವ ಉಪ ವಿಭಾಗ (ನಿವೃತ್ತಿ) | ಪಿರ್ಯಾಧಿದಾರರು |
| ಪ್ರಾ.ಸಾ-5 | ನಿಂಗನಗೌಡ ರುಕ್ಕನಗೌಡ ಪಾಟೀಲ್<br>ಅಬಕಾರಿ ರಕ್ಷಕ ಬಿಜಾಪುರ ಉಪ ವಿಭಾಗ | ಪಂಚರು |

**ಅನುಬಂಧ-2**

**ಪಿರ್ಯಾಧಿದಾರರ ಪರಮಂಡಿಸಲಾದ ದಾಖಲೆಗಳು**

| | |
|---|---|
| ನಿಶಾನೆ ಪಿ-1 | ಪ್ರಥಮ ವರ್ತಮಾನ ವರದಿ |
| ನಿಶಾನೆ ಪಿ-1(ಎ) | ಪ್ರಾ.ಸಾ. -1 ರವರ ಸಹಿ |
| ನಿಶಾನೆ ಪಿ-2 | ಪಂಚನಾಮೆ |
| ನಿಶಾನೆ ಪಿ-2 (ಎ) | ಪ್ರಾ.ಸಾ. 2 ರವರ ಸಹಿ |
| ನಿಶಾನೆ ಪಿ-2(ಬಿ) | ಪ್ರಾ.ಸಾ. -4 ರವರ ಸಹಿ |
| ನಿಶಾನೆ ಪಿ-2(ಸಿ) | ಪ್ರಾ.ಸಾ-5ರವರ ಸಹಿ |
| ನಿಶಾನೆ ಪಿ-3 | ಜಪ್ತು ಮಾಡಿದ ಮಾಡಲ್ಪಟ್ಟ ವಸ್ತುಗಳ ಅನುಬಂಧ |
| ನಿಶಾನೆ ಪಿ-3(ಎ) | ಪ್ರಾ.ಸಾ. -1 ರವರ ಸಹಿ |
| ನಿಶಾನೆ ಪಿ-4 | ರಸಾಯನಿಕ ತಜ್ಞರಿಗೆ ಬರೆದ ಪತ್ರ |
| ನಿಶಾನೆ ಪಿ-5 | ರಸಾಯನಿಕ ತಜ್ಞರ ವರದಿಯ ಪ್ರತಿ |

**ಅನುಬಂಧ-3**

**ಪಿರ್ಯಾಧಿದಾರರ ಪರ ಗುರುತಿಸಲಾದ ವಸ್ತುಗಳು**

1) ಎಂ.ಓ-1 ಟ್ಯಾಂಕರ್ ವಾಹನ ನಂಬರ್: ಹೆಚ್.ಆರ್.38:ಬಿಜಿ:3390

2) ಎಂ.ಓ. -2 ಟಾಟಾ ಇಂಡಿಕಾ ಕಾರು ವಾಹನ ನಂಬರ್: ಕೆಎ:03:ಝಡ್:705.

3) ಎಂ.ಓ-3 ಓರಿಜಿನಲ್ ಚಾಯ್ಸ್ ವಿಸ್ಕಿ 180 ಎಂಎಲ್‌ನ 30 ಮಾದರಿ ಬಾಟಲ್‌ಗಳು.

4) ಎಂ.ಓ. -4 ಓಲ್ಡ್ ಮಂಕ್ ತ್ರಿಬಲ್‌ಎಕ್ಸ್ ರಮ್ 180 ಎಂಎಲ್‌ನ 30 ಮಾದರಿ ಬಾಟಲ್‌ಗಳು.

**ಅನುಬಂಧ-4**

**ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು.**

ಇಲ್ಲಾ

**ಅನುಬಂಧ-5**

**ವಾಹನದ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು**

ಇಲ್ಲಾ.

**ಕೆ.ಆರ್. ಗೌಡ್ರ**
ಪ್ರಾಧೀಕೃತ ಅಧಿಕಾರಿ ಹಾಗೂ
ಅಬಕಾರಿ ಅಧೀಕ್ಷಕರು ಇ.ಐ.ಬಿ.
ಬಿಜಾಪುರ ಜಿಲ್ಲೆ, ಬಿಜಾಪುರ.

ಪಿ.ಆರ್.524

**ಪ್ರಾಧೀಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು ಇ.ಐ.ಬಿ. ಬಿಜಾಪುರ ಜಿಲ್ಲೆ, ಬಿಜಾಪುರ ರವರ ಕಛೇರಿ ನಡುವಳಿಗಳು**

**ಗುನ್ನೆ ನಂ.16/ 2004-05, ದಿನಾಂಕ:29ನೇ ಸೆಪ್ಟೆಂಬರ್, 2003**

**ಅಬಕಾರಿ ಉಪ ನಿರೀಕ್ಷಕರು ಬಿಜಾಪುರ ಉಪವಿಭಾಗ, ಬಿಜಾಪುರ**

**ನಂ.ಇಎಕ್ಸ್‌ಇ: ಸಿಆರ್‌ಎಂ:ಬಿಜೆಪಿ: ಡಿಟಿಸಿಆರ್:72: 2003-04, ದಿನಾಂಕ:13ನೇ ಫೆಬ್ರವರಿ, 2006**

**ಉಪಸ್ಥಿತರು:** ಕೆ.ಆರ್. ಗೌಡ್ರ, ಪ್ರಾಧೀಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇ.ಐ.ಬಿ. ಬಿಜಾಪುರ ಜಿಲ್ಲೆ, ಬಿಜಾಪುರ.

| **ಪಿರ್ಯಾಧಿದಾರರು:** | | **ಆರೋಪಿತರು:** |
|---|---|---|
| ಅಬಕಾರಿ ಉಪ ನಿರೀಕ್ಷಕರು, | **ವಿರುದ್ಧ** | ಆರೋಪಿತರು ಲಭ್ಯವಿರುವುದಿಲ್ಲ. |
| ಬಿಜಾಪುರ ಉಪ ವಿಭಾಗ, ಬಿಜಾಪುರ. | | ಶ್ರೀ ಪರಮಗೊಂಡ ಕ. ಜಮಖಂಡಿ ಸಾ:ಬಿದರಿ, |
| | | (ವಾಹನ ಮಾಲೀಕರು) |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:28.09.2003 ರಂದು ಬೆಳಿಗ್ಗೆ 6.00 ಗಂಟೆಗೆ ಅಬಕಾರಿ ದಾಳಿ ನಿಮಿತ್ತ ಅಬಕಾರಿ ಉಪನಿರೀಕ್ಷಕರು ಬಿಜಾಪುರ ಉಪವಿಭಾಗ ಇವರು ಕಛೇರಿಯಲ್ಲಿದ್ದಾಗ ತಿಡಗುಂದಿ ಗ್ರಾಮದಿಂದ ಕನ್ನೂರ ಗ್ರಾಮಕ್ಕೆ ಹೋಗುವ ರಸ್ತೆಯ ಬದಿಯಲ್ಲಿ ಇರುವ ಒಂದು ಸಜ್ಜೆಯ ಹೊಲದಲ್ಲಿ ಸ್ಪಿರಿಟ್ ಕ್ಯಾನುಗಳನ್ನು ಮುಚ್ಚಿಟ್ಟಿರುತ್ತಾರೆ ಅಂತ ಖಾತ್ರಿದಾಯಕ ಭಾತ್ಮಿ ಬಂದ ಮೇರೆಗೆ, ಅಧಿಕಾರಿಗಳು ತಮ್ಮ ಸಿಬ್ಬಂದಿ ಹಾಗೂ ಪಂಚರೊಂದಿಗೆ ಸದರಿ ಭಾತ್ಮಿ ಬಂದ ಸ್ಥಳಕ್ಕೆ ಹೋಗಿರುವರು. ಅಲ್ಲಿದ್ದಂತಹ ಒಂದು ಸಜ್ಜೆಯ ಹೊಲದಲ್ಲಿ ಹುಡುಕಾಡಿ ನೋಡಲಾಗಿ ಐದು (5) ಪ್ಲಾಸ್ಟಿಕ್ ಕ್ಯಾನುಗಳು ಇದ್ದು ಪ್ರತಿಯೊಂದು ಕ್ಯಾನ್‌ಗಳಲ್ಲಿ ಸುಮಾರು 30 ಲೀಟರ್‌ನಷ್ಟು ಮದ್ಯಸಾರ ಇದ್ದದ್ದು ಕಂಡುಬಂದಿದೆ. ಪ್ರತಿಯೊಂದು ಕ್ಯಾನಿನಿಂದ ರಸಾಯನಿಕ ಪರೀಕ್ಷೆಗಾಗಿ 750 ಎಂಎಲ್‌ನ ಬಾಟಲಿಗಳಲ್ಲಿ ಮದ್ಯಸಾರದ ಮಾದರಿಗಳನ್ನು ಅಧಿಕಾರಿಗಳು ತೆಗೆದು, ತಮ್ಮ ಹಾಗೂ ಪಂಚರು ಸಹಿ ಮಾಡಿದ ಚೀಟಿಗಳನ್ನು ಅಂಟಿಸಿರುತ್ತಾರೆ. ಮದ್ಯಸಾರ ಇಟ್ಟವರು ಯಾರೆಂಬುದರ ಬಗ್ಗೆ ತಪಾಸಣೆ ಮಾಡಲಾಗಿ ಯಾರೂ ಸಿಕ್ಕಿರುವುದಿಲ್ಲ. ನಂತರ ಅಲ್ಲಿಂದ್ದಂತಹ ಮದ್ಯಸಾರ ತುಂಬಿದ ಪ್ಲಾಸ್ಟಿಕ್ ಕ್ಯಾನುಗಳು ಹಾಗೂ ಸ್ಯಾಂಪಲ್ ಬಾಟಲಿಗಳನ್ನು ಒಂದು ಪಂಚನಾಮೆಯಡಿಯಲ್ಲಿ ಜಪ್ತು ಮಾಡಿಕೊಂಡಿರುತ್ತಾರೆ. ನಂತರ ಮಖಣಾಪುರ ಗ್ರಾಮಕ್ಕೆ ಹೋಗಿ ಸದರಿ ಹೊಲದ ಮಾಲೀಕರ ಬಗ್ಗೆ ವಿಚಾರಿಸಲಾಗಿ ಸದರಿ ಹೊಲವು ಗೋವಿಂದ ಶಂಕರ ರಾಠೋಡ ಎಂಬುವವರದು ಇರುತ್ತದೆ ಎಂದು ತಿಳಿದು ಸದರಿ ಹೊಲದ ಮಾಲೀಕನನ್ನು ವಿಚಾರಿಸಲಾಗಿ, ತನ್ನ ಹೊಲದಲ್ಲಿ ಸಿಕ್ಕಂತಹ ಮದ್ಯಸಾರ ತನ್ನದ್ದಲ್ಲವೆಂದು ಹೇಳಿಕೆಯನ್ನು ನೀಡಿರುವರು. ನಂತರ ಅಬಕಾರಿ ಅಧಿಕಾರಿಗಳು ತಮ್ಮ ಕಛೇರಿಗೆ ಹಿಂದುರುಗಿ ಪ್ರಥಮ ವರ್ತಮಾನ ವರದಿಯನ್ನು ತಯಾರಿಸಿ ನ್ಯಾಯಾಲಯಕ್ಕೆ ಕಳುಹಿಸಿರುವರು.

ಅಬಕಾರಿ ಅಧಿಕಾರಿಗಳು ತನಿಖೆಯನ್ನು ಕೈಗೊಂಡು ದಿನಾಂಕ: 29.09.2003 ರಂದು ಸಾಯಂಕಾಲದ ವೇಳೆಯಲ್ಲಿ ಪಂಚರನ್ನು ಬರಮಾಡಿಕೊಂಡು ದಿನಾಂಕ: 28.09.2003 ರಂದು ಮದ್ಯಸಾರ ದೊರೆತ ಸ್ಥಳದಲ್ಲಿ ಹೋಗಿ ನೋಡಲಾಗಿ ಅಲ್ಲಿ ಟೆಂಪೋ ಟ್ರ್ಯಾಕ್ಸ್ ನಂ.ಕೆಎ.29.ಎಂ.1720 ವಾಹನವು ನಿಂತಿದ್ದನ್ನು ಕಂಡು ಮತ್ತು ಅಲ್ಲಿ ಯಾರು ಇಲ್ಲದ್ದನ್ನು ಕಂಡು ಸಂಶಯದಿಂದ ವಾಹನವನ್ನು ಪರಿಶೀಲಿಸಲಾಗಿ ಸದರಿ ವಾಹನದಲ್ಲಿ ಒಂದು ಎರ ಬ್ಯಾಗ್ ಕಂಡು ಬಂದಿದ್ದು ಅದನ್ನು ಬಿಚ್ಚಿ ನೋಡಲಾಗಿ ಓರಿಜಿನಲ್ ಚಾಯ್ಸ್ ಡಿಲಕ್ಸ್ ವಿಸ್ಕಿ ಅಂತ ಬರೆದ ತಗಡಿನ 180 ಮಿಲಿಯ ಬಾಟಲ್ ಬೂಚಗಳು 700, ಮತ್ತು 50 ನಕಲಿ ಭದ್ರತಾ ಚೀಟಿಗಳು ಇದ್ದದ್ದು ಕಂಡುಬಂದಿತು. ಅಲ್ಲದೇ ಒಂದೇ ಕ್ರಮಸಂಖ್ಯೆಗಳುಳ್ಳ 10 ಶೀಟುಗಳು ಅಂದರೆ 500 ಹಸಿರು ಬಣ್ಣದ ಭದ್ರತಾ ಚೀಟಿಗಳು ಎರಬ್ಯಾಗ್‌ದಲ್ಲಿ ಕಂಡು ಪಂಚರ ಸಮಕ್ಷಮದಲ್ಲಿ ಪಂಚನಾಮೆಯನ್ನು ತಯಾರಿಸಿ ದೊರೆತಂಥಹ ನಕಲಿ ಲೆಬಲ್‌ಗಳನ್ನು ತಗಡಿನ ಬೂಚಗಳನ್ನು ಭದ್ರತಾ ಚೀಟಿಗಳನ್ನು ಮತ್ತು ಟೆಂಪೋ ಟ್ರ್ಯಾಕ್ಸ್ ನಂಬರ್: ಕೆಎ.29.ಎಂ.1720 ವಾಹನವನ್ನು ಜಪ್ತು ಮಾಡಿ ತಮ್ಮ ವಶಕ್ಕೆ ತೆಗೆದುಕೊಂಡಿರುವರು. ನಂತರ ಅಧಿಕಾರಿಗಳು ಕಛೇರಿಗೆ ಮರಳಿ ದಿನಾಂಕ: 28.09.2003 ರಂದು ನ್ಯಾಯಾಲಯಕ್ಕೆ ಸಲ್ಲಿಸಿದ ಪ್ರಥಮ ವರ್ತಮಾನ ವರದಿಯ ಮೇಲೆ ಈ ಪ್ರಕರಣವನ್ನು ಕೂಡಾ ಮುಂದುವರೆಸಲು ನ್ಯಾಯಾಲಯಕ್ಕೆ ಮನವಿಯನ್ನು ಸಲ್ಲಿಸಿರುವರು. ನಂತರ ಮಾದರಿಯಾಗಿ ತೆಗೆದ ಮದ್ಯಸಾರವನ್ನು ರಸಾಯನಿಕ ಪರೀಕ್ಷೆಯ ವಿಶ್ಲೇಷಣೆಗಾಗಿ ಬೆಂಗಳೂರಿಗೆ ಕಳುಹಿಸಿಕೊಟ್ಟು ರಸಾಯನಿಕ ತಜ್ಞರಿಂದ ವರದಿಯನ್ನು ಪಡೆದುಕೊಂಡಿದ್ದು ಅದರಲ್ಲಿ ಮದ್ಯಸಾರದ ಅಂಶವಿದ್ದದ್ದು ದೃಢಪಟ್ಟಿರುತ್ತದೆ. ಈ ಪ್ರಕರಣದಲ್ಲಿ ಜಪ್ತು ಮಾಡಿದ ವಾಹನ,

ಬೂಚಗಳು, ಲೇಬಲ್‌ಗಳು ಹಾಗೂ ಭದ್ರತಾ ಚೀಟಿಗಳನ್ನು ಮಾನ್ಯ ನ್ಯಾಯಾಲಯದ ಅನುಮತಿಯ ಮೇರೆಗೆ ಈ ಪ್ರಾಧಿಕಾರದ ಮುಂದೆ ಕಳುಹಿಸಿರುತ್ತಾರೆ.

ವಾಹನದ ಮಾಲೀಕರು ದಿನಾಂಕ: 17.10.2003 ರಂದು ತಮ್ಮ ವಕೀಲರಾದ ಶ್ರೀ ಟಿ.ಎನ್. ಪಡತಾರೆ ರವರ ಮುಖಾಂತರ ಈ ಪ್ರಾಧಿಕಾರದ ಮುಂದೆ ಹಾಜರಾಗಿ ವಕಾಲತ್ತನ್ನು ಸಲ್ಲಿಸಿ, ತಮ್ಮ ವಾಹನವನ್ನು ಬಿಡುಗಡೆಗೋಸ್ಕರ ವಿನಂತಿಸಿರುತ್ತಾರೆ. ಆದರೆ ಸದರಿ ವಾಹನವನ್ನು ಈ ಪ್ರಾಧಿಕಾರವು ತಾತ್ಕಾಲಿಕವಾಗಿ ಬಿಡುಗಡೆಗೊಳಿಸಲು ಸಲ್ಲಿಸಿದ ಅರ್ಜಿಯನ್ನು ತಿರಸ್ಕರಿಸಲಾಗಿದೆ. ನಂತರ ಅರ್ಜಿದಾರರ ತಮ್ಮ ವಕೀಲರ ಮೂಲಕ ಮಾನ್ಯ ಸತ್ರ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿ, ತಾತ್ಕಾಲಿಕವಾಗಿ ಸದರಿ ವಾಹನವನ್ನು ಬಿಡುಗಡೆಗೊಳಿಸಲು ವಿನಂತಿಸಿದ ಮೇರೆಗೆ ಮಾನ್ಯ ಸತ್ರ ನ್ಯಾಯಾಲಯವು ಶೂರಿಟಿಯನ್ನು ಪಡೆದು ಷರತ್ತುಗಳಿಗೆ ಒಳಪಡಿಸಿ ತಾತ್ಕಾಲಿಕವಾಗಿ ಬಿಡುಗಡೆಗೊಳಿಸಲು ಆದೇಶಿಸಿದ ಮೇರೆಗೆ ಸದರಿ ವಾಹನವನ್ನು ಈ ಪ್ರಾಧಿಕಾರವು ತಾತ್ಕಾಲಿಕವಾಗಿ ಬಿಡುಗಡೆಗೊಳಿಸಿದೆ.

ಈ ಪ್ರಾಧಿಕಾರವು ಸದರಿ ವಾಹನದ ವಿಚಾರಣೆಯನ್ನು ನಿಗದಿಪಡಿಸಿ ವಾಹನದ ಮಾಲೀಕರಿಗೆ ಹಾಗೂ ಅವರ ವಕೀಲರುಗಳಿಗೆ ನೋಟಿಸ್ ತೆಗೆಯಲಾಗಿದೆ. ವಾಹನದ ಮಾಲೀಕರು ಹಾಗೂ ಅವರ ವಕೀಲರು ಕೆಲವು ದಿನಗಳಂದು ವಿಚಾರಣೆಗಾಗಿ ಹಾಜರಿದ್ದು, ನಂತರ ನಡೆದ ವಿಚಾರಣೆಗಳಿಗೆ ನೋಟೀಸುಗಳು ಜಾರಿಯಾಗಿದ್ದರೂ ಕೂಡ ಅವರು ಹಾಜರಾಗಿರುವುದಿಲ್ಲ.

ಪ್ರಾಸಿಕ್ಯೂಶನ್ ಪರವಾಗಿ ಒಟ್ಟು ಮೂರು ಜನರ ಸಾಕ್ಷಿಗಳನ್ನು ಪಿ.ಡಬ್ಲ್ಯೂ-1 ರಿಂದ 3 ಎಂದು ಸಹಾಯಕ ಅಭಿಯೋಗ ನಿರ್ದೇಶಕರು ನುಡಿಸಿ ನಿಶಾನೆ ಪಿ-1 ರಿಂದ 7ನ್ನು ಗುರುತಿಸಿಕೊಂಡಿರುವರು. ಅರ್ಜಿದಾರರು ತಮ್ಮ ಪರವಾಗಿ ಮೂರು ಜನರ ಸಾಕ್ಷಿಗಳನ್ನು ಪಿ.ಡಬ್ಲ್ಯೂ-1 ರಿಂದ 3 ಅಂತ ಸಾಕ್ಷಿಗಳನ್ನು ನುಡಿಸಿರುವರು.

ಪ್ರಾಸಿಕ್ಯೂಶನ್ ಪರ ನುಡಿದ ಪಿರ್ಯಾಧಿದಾರರು ಪಿ.ಡಬ್ಲ್ಯೂ-1 ಇವರು ಸಾಕ್ಷಿ ನುಡಿಯುತ್ತಾ ದಿನಾಂಕ:28.09.2003 ರಂದು ಬೆಳಿಗ್ಗೆ ಕನ್ನೂರ ಗ್ರಾಮಕ್ಕೆ ಹೋಗುವ ರಸ್ತೆಯ ಬದಿಯಲ್ಲಿ ಇರುವ ಸಜ್ಜೆಯ ಹೊಲದಲ್ಲಿ ಸ್ಪಿರೀಟ್ ಕ್ಯಾನುಗಳನ್ನು ಮುಚ್ಚಿಟ್ಟಿದ್ದಾರೆ ಅಂತಹ ಭಾತ್ಮಿ ಬಂದ ಮೇರೆಗೆ ತಾನು ತನ್ನ ಸಿಬ್ಬಂದಿಯೊಂದಿಗೆ ಪಂಚರ ಸಮೇತವಾಗಿ ಭಾತ್ಮಿ ಸ್ಥಳಕ್ಕೆ ಹೋದೆವು ಮತ್ತು ಸಜ್ಜೆಯ ಹೊಲದಲ್ಲಿ ಹುಡುಕಾಡಿ ನೋಡಲಾಗಿ ಹೊಲದಲ್ಲಿ 30 ಲೀಟರ್‌ದಷ್ಟು ಸಾಮರ್ಥ್ಯವುಳ್ಳ ಐದು ಪ್ಲಾಸ್ಟಿಕ್ ಕ್ಯಾನುಗಳು ದೊರೆತವೆಂದು, ಅವುಗಳನ್ನು ಬಿಚ್ಚಿ ನೋಡಲಾಗಿ ಅವುಗಳಲ್ಲಿ ಮದ್ಯಸಾರ ಕಂಡು ಬಂದಿತೆಂದು, ಪ್ರತಿಯೊಂದು ಕ್ಯಾನಿನಿಂದ 750 ಎಂಎಲ್‌ದ ದಷ್ಟು ಸ್ಯಾಂಪಲ್‌ನ್ನು ಪ್ರತ್ಯೇಕಿಸಿ ಸೀಲು ಮಾಡಿ ಗುರುತಿನ ಚೀಟಿಗಳನ್ನು ಹಚ್ಚಿದೆವು. ಮದ್ಯಸಾರ ಇಟ್ಟವರು ಯಾರಾದರೂ ಇದ್ದರೆಂಬುದರ ಬಗ್ಗೆ ತಪಾಸಣೆ ಮಾಡಲಾಗಿ ಯಾರು ಸಿಗಲಿಲ್ಲ ನಂತರ ಅಲ್ಲಿ ಸಿಕ್ಕಂತಹ ಪ್ಲಾಸ್ಟಿಕ್ ಕ್ಯಾನುಗಳನ್ನು ಸ್ಯಾಂಪಲ್ ಬಾಟಲ್‌ಗಳನ್ನು ಒಂದು ಪಂಚನಾಮೆಯ ಅಡಿಯಲ್ಲಿ ಜಪ್ತು ಮಾಡಲಾಯಿತೆಂದು ಸಾಕ್ಷಿ ನುಡಿದಿರುವರು. ಸದರಿ ಪಂಚನಾಮೆಯನ್ನು ತನ್ನ ಸಹಿಯನ್ನು ಗುರುತಿಸಿದ್ದರಿಂದ ಪಂಚನಾಮೆಯನ್ನು ನಿಶಾನೆ ಪಿ-1 ಸಾಕ್ಷಿದಾರರ ಸಹಿಯನ್ನು ನಿಶಾನೆ ಪಿ-1(ಎ), ಪಂಚರ ಸಹಿಗಳನ್ನು ನಿಶಾನೆ -1(ಬಿ) ಹಾಗೂ ನಿಶಾನೆ ಪಿ-1(ಸಿ) ಎಂದು ಹಾಗೂ ಇನ್ನೊಬ್ಬ ಎ.ಎಸ್.ಐ. ಎಸ್.ಎಸ್. ದೊಡಮನಿ ರವರ ಸಹಿಯನ್ನು ನಿಶಾನೆ -1(ಡಿ) ಎಂದು ಗುರುತಿಸಲಾಗಿದೆ. ಸ್ಯಾಂಪಲ್ ಬಾಟಲ್‌ಗಳನ್ನು ನೋಡಿ ಗುರುತಿಸಿ ಅವುಗಳನ್ನು ಮುದ್ದೇಮಾಲು-1 ಎಂದು ಗುರುತಿಸಲಾಗಿದೆ.

ಪಿರ್ಯಾಧಿದಾರರು ತಮ್ಮ ಮುಂದುವರಿದ ಸಾಕ್ಷಿಯಲ್ಲಿ ನಂತರ ತಾನು ಮಖಣಾಪುರಕ್ಕೆ ಹೋಗಿ ಹೊಲದ ಮಾಲೀಕರ ಬಗ್ಗೆ ತಿಳಿದು ಗೋವಿಂದ ಶಂಕರ ರಾಠೋಡ ಹೊಲದ ಮಾಲೀಕರಿಗೆ ಮದ್ಯಸಾರ ಬಗ್ಗೆ ವಿಚಾರಿಸಿದ ಬಗ್ಗೆ ಸದರಿ ರಾಠೋಡ ರವರು ಮದ್ಯಸಾರ ತನಗೆ ಸೇರಿದ್ದಲ್ಲ ಎಂದು ಹೇಳಿಕೆಯನ್ನು ನೀಡಿದರು. ನಂತರ ಕಛೇರಿಗೆ ಮರಳಿ ಪ್ರಥಮ ವರ್ತಮಾನದ ವರದಿಯನ್ನು ತಯಾರಿಸಿ ನ್ಯಾಯಾಲಯಕ್ಕೆ ಕಳುಹಿಸಿಕೊಟ್ಟೆ ಎಂದು ಸಾಕ್ಷಿ ನುಡಿದು, ಪ್ರಥಮ ವರ್ತಮಾನದ ಪ್ರತಿಯನ್ನು ಅದರ ಮೇಲಿರುವ ತನ್ನ ಸಹಿಯನ್ನು ಗುರುತಿಸಿ ಅನುಕ್ರಮವಾಗಿ ಅವುಗಳನ್ನು ನಿಶಾನೆ ಪಿ-2 ಮತ್ತು ನಿಶಾನೆ ಪಿ-2 (ಎ) ಎಂದು ಗುರುತಿಸಿಕೊಂಡಿರುವರು.

ಪಿರ್ಯಾಧಿದಾರರು ತಮ್ಮ ಮುಂದುವರಿದ ಸಾಕ್ಷಿಯಲ್ಲಿ ದಿನಾಂಕ: 29.09.2003 ರಂದು ಸಾಯಂಕಾಲ 7.00 ಗಂಟೆಗೆ ದಿನಾಂಕ: 28.09.2003 ರಂದು ಮದ್ಯಸಾರ ಸಿಕ್ಕ ಜಾಗಕ್ಕೆ ಹೆಚ್ಚಿನ ತಪಾಸಣೆಗೆ ಪಂಚರನ್ನು ಬರಮಾಡಿಕೊಂಡು ಅಲ್ಲಿಗೆ ಹೋಗಿ ನೋಡಲಾಗಿ ಅದೇ ಸ್ಥಳದಲ್ಲಿ ಕನ್ನೂರ ಕಡೆ ಮುಖ ಮಾಡಿ ಒಂದು ಟೆಂಪೋಟ್ರ್ಯಾಕ್ಸ್ ನಂ.ಕೆಎ:29:ಎಂ:1720 ನೋಂದಣೆ ನಂಬರ್ ಇದ್ದು ವಾಹನವು ನಿಂತಿದ್ದು ಕಂಡು ಬಂತು. ವಾಹನದಲ್ಲಾಗಲೀ ಅದರ ಸುತ್ತ ಮುತ್ತಾಗಲೀ ಯಾರೂ ಇದ್ದದ್ದು ಕಂಡು ಬರಲಿಲ್ಲಾ ನಮಗೆ ಸಂಶಯ ಬಂದಿದ್ದರಿಂದ ಅದನ್ನು ಪರಿಶೀಲಿಸಿ ನೋಡಲಾಗಿ ಒಳಗಡೆ ಒಂದು ಏರ್‌ಬ್ಯಾಗ್ ಇದ್ದದ್ದು ಕಂಡು ಬಂದಿತು. ಆ ಎರ ಬ್ಯಾಗನ್ನು ಬಿಚ್ಚಿ ನೋಡಲಾಗಿ ಅದರಲ್ಲಿ ಓರಿಜಿನಲ್ ಚಾಯಿಸ್ ಡಿಲಕ್ಸ್ ವಿಸ್ಕಿ ಅಂತ ಬರೆದ ನಕಲಿ ಲೇಬಲ್‌ಗಳು 700 ಇದ್ದವು. ಹಾಗೂ ಓರಿಜಿನಲ್ ಚಾಯಿಸ್ ಜಾನ ಡಿಸ್ಟಿಲರಿಸ್ ಲಿ. ಅಂತ ಬರೆದಿದ್ದು ತಗಡಿನ 180 ಮಿಲಿಯ ಬಾಟಲ್‌ಗಳ ಬೂಚಗಳು ಒಟ್ಟು 700 ಇದ್ದವು ಮತ್ತು ಕ್ರಮಸಂಖ್ಯೆ 4010241 ರಿಂದ 4010290ರ ವರೆಗಿನ ನಂಬರ್ ಇರುವ 50 ನಕಲಿ ಭದ್ರತಾ ಚೀಟಿಗಳು ಕಂಡು ಬಂದವು. ಇದೇ ಕ್ರಮ ಸಂಖ್ಯೆಗಳುಳ್ಳ ಒಟ್ಟು 10 ಶೀಟ್‌ಗಳು ಅಂದರೆ ಒಟ್ಟು 500 ಹಸಿರು ಬಣ್ಣದ ಭದ್ರತಾ ಚೀಟಿಗಳು ಕಂಡುಬಂದವು. ಅಲ್ಲೆ ಸ್ಥಳದಲ್ಲಿ ಒಂದು ಪಂಚನಾಮೆಯನ್ನು ತಯಾರಿಸಿ ಆ ವಾಹನವನ್ನು ಮತ್ತು ಅದರಲ್ಲಿ ದೊರೆತಂಥಹ ನಕಲಿ ಲೇಬಲ್‌ಗಳನ್ನು ತಗಡಿನ ಬೂಚಗಳನ್ನು ಭದ್ರತಾ ಚೀಟಿಗಳನ್ನು ತನ್ನ ವಶಕ್ಕೆ ತೆಗೆದುಕೊಂಡನೆಂದು ಸಾಕ್ಷಿ ನುಡಿದಿರುವರು. ಸದರಿ ಜಪ್ತು ಪಂಚನಾಮೆಯನ್ನು ಗುರುತಿಸಿದ್ದರಿಂದ ಅದನ್ನು ನಿಶಾನೆ ಪಿ-3 ಎಂದು ಅದರಲ್ಲಿರುವ ಸಾಕ್ಷಿದಾರರ ಸಹಿಯನ್ನು ನಿಶಾನೆ ಪಿ-3(ಎ) ಅಂತ ಗುರುತಿಸಲಾಗಿದೆ. ಅಲ್ಲಿ ದೊರೆತಂಥಹ ನಕಲಿ ಲೇಬಲ್‌ಗಳನ್ನು ನೋಡಿ ಗುರುತಿಸಿ ಎಂ.ಓ.6 ಅಂತ ಗುರುತಿಸಿಕೊಂಡಿರುವರು ಅಲ್ಲಿ ದೊರೆತ 700 ಬೂಚಗಳನ್ನು ಗುರುತಿಸಿ ಎಂ.ಓ.7 ಅಂತ ಗುರುತಿಸಿಕೊಂಡಿರುವರು. ಭದ್ರತಾ ಚೀಟಿಗಳನ್ನು ನೋಡಿ ಗುರುತಿಸಿದ್ದರಿಂದ ಅವುಗಳನ್ನು ಎಂ.ಓ.8 ಎಂದು, ವಾಹನ ನಂಬರ್ ಕೆಎ:29:ಎಂ:1720 ನೇದ್ದನ್ನು ಗುರುತಿಸಿದ್ದರಿಂದ ಎಂ.ಓ.9 ಎಂದು ಗುರುತಿಸಲಾಗಿದೆ. ಎರಬ್ಯಾಗನ್ನು ಎಂ.ಓ.10 ಎಂದು ಗುರುತಿಸಲಾಗಿದೆ. ನಂತರ ಕಛೇರಿಗೆ ಬಂದು ದಿನಾಂಕ:28.09.2003ರಂದು ನ್ಯಾಯಾಲಯಕ್ಕೆ ಸಲ್ಲಿಸಿದೆ. ಪ್ರಥಮ ವರ್ತಮಾನ ವರದಿಯ ಮೇಲೆ ಈ ಪ್ರಕರಣವನ್ನು ಕೂಡಾ ಮುಂದುವರೆಸಲು ನ್ಯಾಯಾಲಯಕ್ಕೆ ಒಂದು ಮನವಿಯನ್ನು ಸಲ್ಲಿಸಲಾಗಿದ್ದು ಅದರ ಪ್ರತಿಯನ್ನು ನೋಡಿ ಅದನ್ನು ನಿಶಾನೆ ಪಿ-4 ಅಂತ ತನ್ನ ಸಹಿಯನ್ನು ನಿಶಾನೆ ಪಿ-4(ಎ) ಅಂತ ಗುರುತಿಸಲಾಗಿದೆ. ಒಂದು ಸರ್ಚ್ ಮೆಮೋವನ್ನು ಕೂಡಾ ನ್ಯಾಯಾಲಯಕ್ಕೆ ಸಲ್ಲಿಸಲಾಗಿದೆ ಎಂದು ಸಾಕ್ಷಿ ನುಡಿದು ಅದರ ಪ್ರತಿಯನ್ನು ಗುರುತಿಸಿದ್ದರಿಂದ ಅದನ್ನು ನಿಶಾನೆ ಪಿ-5 ಅಂತ ಅದರಲ್ಲಿರುವ ಸಾಕ್ಷಿದಾರರ ಸಹಿಯನ್ನು ನಿಶನೆ ಪಿ-5(ಎ) ಅಂತ ಗುರುತಿಸಲಾಗಿದೆ.

ಅರ್ಜಿದಾರರ ಪರ ವಕೀಲರು ಪಿರ್ಯಾಧಿದಾರರು ಪಾಟೀ ಸವಾಲು ಮಾಡಿದ್ದು ಮುಖ್ಯವಾಗಿ ಪಾಟೀ ಸವಾಲಿನಲ್ಲಿ ದಿನಾಂಕ: 29.09.2003 ರಂದು ಬೆಳಿಗ್ಗೆ ನಮ್ಮ ಭಾತ್ಮಿದಾರರಿಂದ ಯಾವುದೇ ಭಾತ್ಮಿ ಬಾರದ್ದರಿಂದ ಸಾಯಂಕಾಲದವರೆಗೆ ಕಾದು ಸಂಶಯದ ಮೇಲೆ ಆ ದಿನ ಸಾಯಂಕಾಲ 7.00 ಗಂಟೆಗೆ ಘಟನಾ ಸ್ಥಳಕ್ಕೆ ಹೋದವೆಂದು, ವಾಹನ ಸಿಕ್ಕ ಸ್ಥಳದ ಚಕ್‌ಬಂಧಿ ತನಗೆ ಹೇಳಲಾಗುವುದಿಲ್ಲವೆಂದು ಆ ವೇಳೆಯಲ್ಲಿ ಬೇರೆ ಜನರು ಸೇರಿರಲಿಲ್ಲವೆಂದು ವಾಹನ ಹಿಂಭಾಗದಲ್ಲಿ ಎಂ.ಓ.10 ದೊರೆಯಿತೆಂದು, ದಿನಾಂಕ: 29.09.2003ರಂದು ಮಖಣಾಪುರ ತಾಂಡಾದ ಗೋವಿಂದ

ರಾಠೋಡ ಇವರನ್ನು ವಾಹನದ ಬಗ್ಗೆ ವಿಚಾರಣೆ ಮಾಡಲಿಲ್ಲ ಇವರ ಹೇಳಿಕೆಯನ್ನು ಬರೆದುಕೊಂಡಿಲ್ಲಾ ನಿಶಾನೆ ಪಿ-3, 4, 5 ಗಳನ್ನು ಅಂದೆ ನ್ಯಾಯಾಧೀಶರ ಮನೆಗೆ ಅಥವಾ ಮಾರನೇ ದಿವಸ ನ್ಯಾಯಾಲಯಕ್ಕೆ ಹಾಜರುಪಡಿಸಿದೆ ಎಂಬುದರ ಬಗ್ಗೆ ತನಗೆ ನೆನಪಿಲ್ಲವೆಂದು ನುಡಿದಿರುವರು. ಮುಂದುವರಿದು ಮುದ್ದೇಮಾಲು-6 ರಿಂದ 8 ಹಾಗೂ 10 ದಿನಾಂಕ: 28.09.2003ರಂದು ಮದ್ಯಸಾರ ಸಿಕ್ಕ ಸ್ಥಳದಲ್ಲಿಯೇ ದೊರೆತಿದ್ದವು ಮತ್ತು ಅವುಗಳ ಎಂ.ಓ. -9ರಲ್ಲಿ ದೊರಕಿಲ್ಲ ಅಂತ ಹೇಳುವುದು ಸರಿಯಲ್ಲ ಅಂತ ಮತ್ತು ಎಂ.ಓ. -9ನ್ನು ಮದ್ಯಸಾರ ಸಿಕ್ಕ ಸ್ಥಳದಲ್ಲಿಯೇ ನಿಶಾನೆ ಪಿ-3ರ ಅಡಿಯಲ್ಲಿ ಜಪ್ತು ಮಾಡಿದೆವು ಅಂತ ಸುಳ್ಳು ಹೇಳುತ್ತಿದ್ದೇನೆ. ಅಂದರೆ ಸರಿಯಲ್ಲ ಅಂತ ಪಾಟೀ ಸವಾಲಿನಲ್ಲಿ ನುಡಿದಿರುತ್ತಾರೆ.

ಪಿ.ಡಬ್ಲ್ಯೂ-2 ತನ್ನ ಸಾಕ್ಷಿಯಲ್ಲಿ ಕಳೆದ 3 ವರ್ಷದಿಂದ ಬಿಜಾಪುರ ನಗರ ಉಪ ವಲಯದಲ್ಲಿ ಅಬಕಾರಿ ಉಪ ನಿರೀಕ್ಷಕರೆಂದು ಸೇವೆ ಸಲ್ಲಿಸುತ್ತಾ ಇದ್ದೇನೆ. ಈ ಪ್ರಕರಣದ ಕಡತವನ್ನು ಹಾಗೂ ಮುದ್ದೆಮಾಲನ್ನು ಪಿ.ಡಬ್ಲ್ಯೂ-1ರವರಿಂದ ಪಡೆದುಕೊಂಡೆ. ನಂತರ ದಿನಾಂಕ: 03.11.2003ರಂದು ಮುದ್ದೇಮಾಲು-1 ರಿಂದ 5 ಇವುಗಳನ್ನು ಅಬಕಾರಿ ರಕ್ಷಕ ಶ್ರೀ ಎಸ್.ಎಂ. ಹುದ್ದಾರ ರವರ ಮುಖಾಂತರ ರಸಾಯನಿಕ ಪರೀಕ್ಷೆ ವಿಶ್ಲೇಷಣೆಗಾಗಿ ಕಳುಹಿಸಲಾಯಿತು. ಅವರಿಗೆ ಕಳುಹಿಸಿದ ಕವರಿಂಗ್ ಲೆಟರ್ ಪ್ರತಿಯನ್ನು ನೋಡಿ ಅದನ್ನು ನಿಶಾನೆ ಪಿ-6 ಎಂದು ಗುರುತಿಸಲಾಗಿದೆ. ದಿನಾಂಕ:06.11.2003ರಂದು ರಸಾಯನಿಕ ವಿಶ್ಲೇಷಕರಿಂದ ವರದಿ ಬಂದಿದ್ದು ಅದನ್ನು ನಿಶಾನೆ ಪಿ-7 ಅಂತ ಗುರುತಿಸಲಾಗಿದೆ. ಅಲ್ಲದೇ ನಿಶಾನೆ ಪಿ-7 ರೊಂದಿಗೆ ಮುದ್ದೇಮಾಲು-1 ರಿಂದ 5ನ್ನು ಕೂಡಾ ಮರಳಿ ಪಡೆಯಲಾಯಿತೆಂದು ಸಾಕ್ಷಿ ನುಡಿದಿರುವರು. ಈ ಸಾಕ್ಷಿಯನ್ನು ಅರ್ಜಿದಾರರ ಪರ ವಕೀಲರು ಪಾಟೀ ಸವಾಲು ಮಾಡಿರುವುದಿಲ್ಲ.

ಪಿ.ಡಬ್ಲ್ಯೂ-3 ಲಕ್ಷ್ಮಣ ಕಣಬುರು, ಪಂಚರು ತಮ್ಮ ಮುಖ್ಯ ವಿಚಾರಣೆಯಲ್ಲಿ ಸುಮಾರು 3 ವರ್ಷದ ಹಿಂದೆ ತನ್ನನ್ನು ಮತ್ತು ಚಂದ್ರಶೇಖರ ಸದಾಶಿವ ಪಾಟೀಲ್ ಅವರನ್ನು ಬಿಜಾಪುರ ಅಬಕಾರಿ ಅಧಿಕಾರಿಗಳು ಒಂದು ದಿನ ಬೆಳಿಗ್ಗೆ 6.00 ಗಂಟೆಯ ವೇಳೆಯಲ್ಲಿ ಬಿಜಾಪುರ ಅಬಕಾರಿ ಕಛೇರಿಗೆ ಕರೆಯಿಸಿ, ನಾವು ಅಬಕಾರಿ ದಾಳಿಗೆ ಹೊರಟಿದ್ದು ಅಬಕಾರಿ ಅಪರಾಧ ಪತ್ತೆಯಾದಲ್ಲಿ ತಾವು ಪಂಚರೆಂದು ಕಾರ್ಯನಿರ್ವಹಿಸಲು ನಮ್ಮನ್ನು ಕರೆದುಕೊಂಡು ರಾಷ್ಟ್ರೀಯ ಹೆದ್ದಾರಿ-13ನೇದ್ದರ ಮೇಲೆ ಸೊಲ್ಲಾಪುರದ ಕಡೆಗೆ ಹೊರಟು ತಿಡಗುಂದಿಯಿಂದ ಕನ್ನೂರ ಕಡೆಗೆ ಹೋಗುವ ರಸ್ತೆಯ ಮೇಲೆ ಸುಮಾರು 2-3 ಕಿ.ಮೀ. ಅಂತರದ ಮೇಲೆ ಅಕ್ಕ ಪಕ್ಕದ ಹೊಲಗಳಲ್ಲಿ ಹುಡುಕಾಟ ಮಾಡಿದರೂ, ರಸ್ತೆಯ ಎಡಬದಿಯಲ್ಲಿ ಒಂದು ಸಜ್ಜೆಯ ಹೊಲದಲ್ಲಿ ಐದು (5) ಪ್ಲಾಸ್ಟಿಕ್ ಕ್ಯಾನುಗಳು ದೊರೆತಿದ್ದು ಅವುಗಳನ್ನು ತೆಗೆದು ನೋಡಲಾಗಿ ಅವುಗಳಿಂದ ಘಾಟ್ ವಾಸನೆ ಬರುತ್ತಿತ್ತು. ಅದು ಮದ್ಯಸಾರವೆಂದು ಅಧಿಕಾರಿಗಳು ದೃಢಪಡಿಸಿ ಪ್ರತಿಯೊಂದು ಕ್ಯಾನಿನಿಂದ 750 ಎಂಎಲ್‌ನಷ್ಟು 5 ಬಾಟಲಿಗಳನ್ನು ಸ್ಯಾಂಪಲ್‌ಗಾಗಿ ಮದ್ಯಸಾರವನ್ನು ತೆಗೆದು ಅವುಗಳನ್ನು ಸೀಲು ಮಾಡಿ ನಮ್ಮ ಹಾಗೂ ಅಧಿಕಾರಿಗಳ ಸಹಿವುಳ್ಳ ಚೀಟಿಗಳನ್ನು ಅಂಟಿಸಿದರು ನಂತರ ದೊರೆತ ಐದು (5) ಕ್ಯಾನುಗಳು ಅದರಲ್ಲಿರುವ ಸುಮಾರು 150 ಲೀಟರ್‌ನಷ್ಟು ಮದ್ಯಸಾರ ಎಲ್ಲವುಗಳನ್ನು ಪಂಚನಾಮೆಯ ಅಡಿಯಲ್ಲಿ ಜಪ್ತು ಮಾಡಿ ಪಂಚನಾಮೆಯ ಮೇಲೆ ತಮ್ಮ ಸಹಿ ಪಡೆದರೆಂದು ಸಾಕ್ಷಿ ನುಡಿದಿರುವರು. ಸದರಿ ಪಂಚನಾಮೆಯನ್ನು ಗುರುತಿಸಿದ್ದು ಅದನ್ನು ಈಗಾಗಲೇ ನಿಶಾನೆ ಪಿ-3 ಎಂದು ಗುರುತಿಸಲಾಗಿದೆ. ತನ್ನ ಸಹಿಯನ್ನು ಗುರುತಿಸಿದ್ದರಿಂದ ಅದನ್ನು ನಿಶಾನೆ ಪಿ-1(ಬಿ) ಎಂದು ಗುರುತಿಸಲಾಗಿದೆ.

ಪಿ.ಡಬ್ಲ್ಯೂ-3 ತಮ್ಮ ಸಾಕ್ಷಿ ಮುಂದುವರಿದ ಮುಖ್ಯ ವಿಚಾರಣೆಯಲ್ಲಿ ದಿನಾಂಕ: 29.09.2003 ರಂದು ಸಾಯಂಕಾಲ 7.00 ಗಂಟೆಗೆ ಅಬಕಾರಿ ಸಬ್‌ಇನ್ಸ್‌ಪೆಕ್ಟರ್ ಬಿಜಾಪುರ ಉಪ ವಿಭಾಗ ಇವರು ತನ್ನನ್ನು ಮತ್ತು ಸದಾಶಿವ ಬಿದರಿ, ಎನ್ನುವವರನ್ನು ತಮ್ಮ ಕಛೇರಿಗೆ ಕರೆಯಿಸಿ ಈಗಾಗಲೇ ನಿನ್ನೆ ಮದ್ಯಸಾರದ ಸಂಬಂಧ ಯಾವುದೋ ಆರೋಪಿತರು ದಸ್ತಗಿರಿ ಆಗಿರುವುದಿಲ್ಲ ಈಗ ಮುಂದಿನ ತನಿಖೆಗಾಗಿ ಹೊರಟಿದ್ದು ಪಂಚರೆಂದು ಕಾರ್ಯನಿರ್ವಹಿಸಲು ಕೇಳಿಕೊಂಡರು. ನಾವು ಅಧಿಕಾರಿಗಳು ರಾಷ್ಟ್ರೀಯ ಹೆದ್ದಾರಿ-13ರ ಮೇಲೆ ಸೊಲ್ಲಾಪುರ ಕಡೆಗೆ ಹೋಗಿ ತಿಡಗುಂದಿ ಗ್ರಾಮದಿಂದ ಕನ್ನೂರ ಗ್ರಾಮ ಕಡೆಗೆ ಹೊರೆಟೆವು. ಆಗ ಸುಮಾರ 2-3 ಕಿಲೋಮೀಟರ್ ಅಂತರ ಮೆಲೆ ನಿನ್ನೆ ಸೆರೆ ಹಿಡಿದ ಸ್ಥಳದ ಹತ್ತಿರ ಒಂದು ವಾಹನವು ಕನ್ನೂರ ಕಡೆ ಮುಖ ಮಾಡಿ ನಿಂತಿರುವುದು ಕಾಣಿಸಿತು. ಅದು ಒಂದು ಟೆಂಪೊ ಟ್ರ್ಯಾಕ್ಸ್ ಗಾಡಿ ಇದ್ದು ವಾಹನವನ್ನು ತಪಾಸಿಸಲಾಗಿ ಅದರಲ್ಲಿ ಒಂದು ಕರಿ ಬಣ್ಣದ ಏರ್‌ಬ್ಯಾಗ್ ಸಿಕ್ಕಿತು ಅದನ್ನು ತೆಗೆದು ನೋಡಲಾಗಿ ಓರಿಜಿನಲ್ ಚಾಯ್ಸ್ ಡಿಲಕ್ಸ್ ಬರೆದ ನಕಲಿ ಏಳು ನೂರ (700) ಲೇಬಲ್‌ಗಳು ಮತ್ತು ಓರಿಜಿನಲ್ ಚಾಯ್ಸ್ ಜಾನ ಡಿಸ್ಟಿಲರಿ ಅಂತ ಬರೆದಿದ್ದ 180 ಮಿಲಿಯ ತಗಡಿನ ಏಳು ನೂರ(700) ನಕಲಿ ಬೂಚಗಳು ಹಾಗೂ ಮದ್ಯದ ಬಾಟಲ್‌ಗಳ ಮೇಲೆ ಹಚ್ಚುವ ನಕಲಿ ಲೇಬಲ್‌ಗಳು ಇದ್ದವು. ಆ ನಕಲಿ ಲೇಬಲ್‌ಗಳು ಹಸಿರು ಬಣ್ಣದಿದ್ದು ಮೇಲೆ ಇದ್ದ ನಂಬರ್‌ಗಳನ್ನು ಅಬಕಾರಿ ಅಧಿಕಾರಿಗಳು ಅಲ್ಲೇ ಇದ್ದ ವಾಹನ ನಂಬರ್: ಕೆಎ:29:ಎಂ:1720 ನಕಲಿ ಮದ್ಯ ತಯಾರಿಸಲು ಉಪಯೋಗಿಸತಕ್ಕದ್ದಂತಹ ಲೆಬಲ್‌ಗಳನ್ನು ಮತ್ತು ಬೂಚ್‌ಗಳನ್ನು ಜಪ್ತು ಮಾಡಿ ನಮ್ಮ ಸಮಕ್ಷಮ ಪಂಚನಾಮೆಯನ್ನು ಅಬಕಾರಿ ಅಧಿಕಾರಿಗಳು ಬರೆದು ಮುಗಿಸಿದರೆಂದು ಸಾಕ್ಷಿ ನುಡಿದಿರುವರು. ಸದರಿ ಪಂಚನಾಮೆಯನ್ನು ನೋಡಿ ಗುರುತಿಸಿದ್ದು ಅದನ್ನು ನಿಶಾನೆ ಪಿ-3 ಎಂದು, ಅದರಲ್ಲಿರುವ ಸಾಕ್ಷಿದಾರರ ಸಹಿಯನ್ನು ನಿಶಾನೆ ಪಿ-3(ಬಿ) ಅಂತ ಗುರುತಿಸಲಾಗಿದೆ.

ಅರ್ಜಿದಾರರ ಪರವಾಗಿ ಶಿವಾನಂದ ಗುರುಪಾದಪ್ಪ ಜುಳಜುಳಿ ಎನ್ನುವರು ಡಬ್ಲ್ಯೂ-1 ತಮ್ಮ ಸಾಕ್ಷಿಯಲ್ಲಿ ತಾನು ಕನ್ನೂರದ ವಾಸಿ ವೃತ್ತಿಯಿಂದ ಚಾಲಕ ಕನ್ನೂರ ಗ್ರಾಮದ ಯಲ್ಲಪ್ಪ ಮೇತ್ರಿ ಎಂಬುವವರ ವಾಹನವನ್ನು ನಡೆಸುತ್ತೇನೆ. ವಾಹನದ ನಂಬರ್ ಕೆಎ:29:ಎಂ:1720ರ ಚಾಲಕನಾದ ರಾಜು ರವರ ಪರಿಚಯವಿರುತ್ತದೆ. ಅವರು ಕನ್ನೂರದ ಮಠಕ್ಕೆ ಬರುತ್ತಾರೆಂದು ಅವರು ಕೊನೆಯ ಬಾರಿ 5-6 ತಿಂಗಳ ಹಿಂದೆ ಕನ್ನೂರ ಗ್ರಾಮಕ್ಕೆ ವಾಹನದೊಂದಿಗೆ ಬಂದಿದ್ದರು. ಆಗ ಮಠದ ಬಳಿ ಪೊಲೀಸರು ಬಂದು ರಾಜು, ನನ್ನ ಮಾತನಾಡಿಸಿದರು. ಗಾಡಿಯ ಬಗ್ಗೆ ವಿಚಾರಣೆ ಮಾಡುತ್ತಿದ್ದರು. ವಾಹನವನ್ನು ಬಿಜಾಪುರದ ಕಡೆಗೆ ತೆಗೆದುಕೊಂಡು ಬಂದರು ಎಂದು ಸಾಕ್ಷಿ ನುಡಿದಿರುವರು.

ಪಾಟೀ ಸವಾಲಿನಲ್ಲಿ ಈ ಸಾಕ್ಷಿದಾರರು ತಾನು ಕನ್ನೂರ ಗ್ರಾಮದವನೆಂದು ಹೇಳಲು ತನ್ನ ಹತ್ತಿರ ಯಾವುದೇ ದಾಖಲಾತಿಗಳಿಲ್ಲವೆಂದು ಚಾಲನಾ ಪತ್ರ ಇಲ್ಲವೆಂದು ರಾಜು, ಯಾವ ಊರಿನವ, ತನಗೆ ಗೊತ್ತಿರುವುದಿಲ್ಲವೆಂದು ಪೊಲೀಸರು ಬಂದಾಗ ನಾನು ವಾಹನದಿಂದ ದೂರ ನಿಂತಿದ್ದೆ ಎಂದು ಮುಖ್ಯವಾಗಿ ಪಾರ್ಟಿ ಸವಾಲುನಲ್ಲಿ ನುಡಿದಿರುವರು.

ಡಬ್ಲ್ಯೂ-2 ಗುಂಡಪ್ಪ ಎನ್ನುವವರು ಮುಖ್ಯವಾಗಿ ತಮ್ಮ ವಿಚಾರಣೆಯಲ್ಲಿ ದಿನಾಂಕ: 29.09.2003ರಂದು ನಾನು ಹಾಗೂ ಸದರಿ ವಾಹನದ ಮಾಲೀಕರಾದ ಪರಮಗೊಂಡ ಜಮಖಂಡಿ ರಾಜು ಗೌಂಡಿ ಹಾಗೂ ಡ್ರೈವರ್ ರಾಜು, ಶಂಕರಪ್ಪ ಕಾತರಕಿ ಎಂಬುವವರು ಕನ್ನೂರ ಗ್ರಾಮದ ದೇವಸ್ಥಾನಕ್ಕೆ ಹೋಗಿದ್ದೆವು. ನಾವು ಟ್ರ್ಯಾಕ್ಸ್ ನಂಬರ್ ಕೆಎ:29:ಎಂ:1720 ರಲ್ಲಿ ಹೋಗಿದ್ದೆವು. ದೇವಸ್ಥಾನದಿಂದ ಹೊರಗೆ ಬಂದಾಗ ಪೊಲೀಸರು ಅಲ್ಲಿ ಇದ್ದು ಬಾಟಲಿಯ ಬೂಚಗಳು, ಲೆಬಲ್ ವಾಹನದಲ್ಲಿ ಇವೆ ಅಂತ ಗಾಡಿಯನ್ನು ತೆಗೆದುಕೊಂಡು ನಡಿ ಅಂತ ರಾಜು, ಇವನಿಗೆ ತಿಳಿಸಿದರು. ನಮ್ಮನ್ನು ಕರೆದುಕೊಂಡುಬಂದು ಬಿಜಾಪುರದ ಗಾಂಧಿಚೌಕ ಬಳಿ ಇಳಿಸಿದರು ಅಂತ ಸಾಕ್ಷಿ ನುಡಿದಿರುವರು. ಪಾಟೀ ಸವಾಲಿನಲ್ಲಿ ತಾವು ವಾಹನವನ್ನು ಬಾಡಿಗೆಯಿಂದ ಪಡೆದಿದ್ದೆವು ಎಂದು ಬಂದ ಪೊಲೀಸರು ಯಾವ ಠಾಣೆಗೆ ಸಂಬಂಧಿಸಿದವರು ಇದ್ದರು ಎಂಬುದು ಹೇಳಲು ಬರುವುದಿಲ್ಲ ಎಂದು ನುಡಿದಿರುವರು.

ಅರ್ಜಿದಾರರ ಪರಮಗೊಂಡ ಜಮಖಂಡಿ, ಡಬ್ಲ್ಯೂ-3 ಸಹಾ ತಮ್ಮ ಮುಖ್ಯ ವಿಚಾರಣೆಯಲ್ಲಿ ತಾನು ವಾಹನದ ನಂಬರ್ ಕೆಎ:29:ಎಂ:1720 ನೇದ್ದರ ಮಾಲೀಕ ಎಂದು ದಿನಾಂಕ: 29.09.2003ರಂದು ಕನ್ನೂರ ದೇವಸ್ಥಾನಕ್ಕೆ ಹೋಗಿದ್ದೆವು ಎಂದು ಅಲ್ಲಿ ಪೊಲೀಸರು ಬಂದು ವಿಚಾರಿಸಿ ತಮ್ಮನ್ನು ಆ ವಾಹನದಲ್ಲಿ ಕುಳ್ಳಿರಿಸಿಕೊಂಡು ಬಿಜಾಪುರಕ್ಕೆ ಬಂದು ಬಿಜಾಪುರ ಗಾಂಧಿಚೌಕದಲ್ಲಿ ನಾನು ನನ್ನ ಜೊತೆ ಬಂದ ಎಲ್ಲರನ್ನೂ ಇಳಿಸಿ ಡ್ರೈವರ್‌ನೊಂದಿಗೆ ಎಕ್ಸೈಜ್ ಡಿಪಾರ್ಟ್‌ಮೆಂಟ್ ಜನರು ತಮ್ಮ ಕಛೇರಿಗೆ ತೆಗೆದುಕೊಂಡು ಹೋಗುತ್ತೇವೆ ಅಂತ ಹೇಳಿದರು. ನಾವೇನೂ ವಿಚಾರ ಮಾಡದೇ ಬಸ್ಸಿನಲ್ಲಿ ಊರಿಗೆ ಹೋದೆವು ಎಂದು ಸಾಕ್ಷಿ ನುಡಿದಿದ್ದು ಇವರನ್ನು ಕೂಡಾ ಅಭಿಯೋಜಕರ ವತಿಯಿಂದ ಪಾಟೀ ಸವಾಲು ಮಾಡಲಾಗಿದೆ.

ಪ್ರಾಸಿಕ್ಯೂಶನ್ ಪರ ಸಾಕ್ಷಿ ಹಾಗೂ ಎ.ಡಿ.ಪಿ. ರವರ ವಾದದ ಆಧಾರದ ಮೇಲೆ ಮುಂದಿನ ಆದೇಶ ಹೊರಡಿಸುವ ಮುನ್ನ ಕೆಳಕಂಡ ವಿವಾದಾಂಶಗಳಿಗೆ ಉತ್ತರವನ್ನು ಪಡೆಯಬೇಕಾಗಿರುತ್ತದೆ.

**ಮೊದಲನೆಯ ವಿವಾದಾಂಶ**

ದಿನಾಂಕ: 29.09.2003 ರಂದು ಸದರಿ ವಾಹನದಲ್ಲಿ ನಕಲಿ ಮದ್ಯ ತಯಾರಿಕೆಗಾಗಿ ಓರಿಜಿನಲ್ ಚಾಯ್ಸ್ ವಿಸ್ಕಿ ಅಂತ ಬರೆದ ನಕಲಿ ಲೇಬಲ್‌ಗಳು 700 ಮತ್ತು ಓರಿಜಿನಲ್ ಚಾಯ್ಸ್ ಜಾನ್ ಡಿಸ್ಟಿಲರಿ ಲಿ., ಅಂತ ಬರೆದ ಬಾಟಲಿಯ ಮೇಲೆ ಮುಚ್ಚುವ ತಗಡು ಬೂಚಗಳು700, ನಕಲಿ ಭದ್ರತಾ ಚೀಟಿಗಳು 500 ಗಳ ಸಾಗಾಣಿಕೆಗಾಗಿ ಉಪಯೋಗಿಸಲಾಗಿದೆಯೇ? ಇದು ಕರ್ನಾಟಕ ಅಬಕಾರಿ ಕಾಯ್ದೆ 1965 ಕಲಂ 32, 34 ರೀತ್ಯಾ ಅಪರಾಧವಾಗಿದೆಯೇ? ಅಥವಾ ಇಲ್ಲಾ?

**ಎರಡನೆಯ ವಿವಾದಾಂಶ**

ಸದರಿ ವಾಹನದಲ್ಲಿ ನಕಲಿ ಮದ್ಯ ತಯಾರಿಕೆಗಾಗಿ ಓರಿಜಿನಲ್ ಚಾಯ್ಸ್ ವಿಸ್ಕಿ ಅಂತ ಬರೆದ ನಕಲಿ ಲೇಬಲ್‌ಗಳು700 ಮತ್ತು ಓರಿಜಿನಲ್ ಚಾಯ್ಸ್ ಜಾನ್ ಡಿಸ್ಟಿಲರಿ ಲಿ., ಅಂತ ಬರೆದ ಬಾಟಲಿಯ ಮೇಲೆ ಮುಚ್ಚುವ ತಗಡು ಬೂಚಗಳು-700, ನಕಲಿ ಭದ್ರತಾ ಚೀಟಿಗಳು 500 ಗಳ ಸಾಗಾಣಿಕೆಯಾಗಿರುವ ಬಗ್ಗೆ ತನ್ನ ತಿಳುವಳಿಕೆಗೆ ಬಾರದೇ ಅಥವಾ ತಾನು ಶಾಮೀಲಾಗದೇ ನಡೆದಿದೆ ಎಂಬುದರ ಬಗ್ಗೆ ಅರ್ಜಿದಾರನಾಗಲಿ ಅಥವಾ ವಾಹನ ಚಾಲಕರಾಗಲಿ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ? ಅಥವಾ ಇಲ್ಲಾ?

**ಮೂರನೆಯ ವಿವಾದಾಂಶ**

ವಾಹನವು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಿಕ್ಕೆ ಯೋಗ್ಯವಾಗಿದೆಯೇ? ಅಥವಾ ಇಲ್ಲಾ?

**ಮೊದಲನೆಯ ವಿವಾದಾಂಶಕ್ಕೆ ಉತ್ತರ ಸಕಾರಾತ್ಮಕ (ಹೌದು)**

ಪ್ರಾಸಿಕ್ಯೂಶನ್ ಸಾಕ್ಷಿ ನುಡಿದ ಪಿರ್ಯಾಧಿದಾರರು ನೀಡಿರುವ ಹೇಳಿಕೆಯನ್ನು ಗಮನಿಸಿದಾಗ ಮಹಜರದಲ್ಲಿ ಇರುವ ಅಂಶಗಳನ್ನು ಪ್ರಬಲವಾಗಿ ಸಮರ್ಥಿಸುತ್ತಾರೆ. ಪಂಚರು ಸಾಕ್ಷಿಯು ಕೂಡಾ ಪಿರ್ಯಾಧಿಯ ಸಾಕ್ಷಿಗೆ ಪೂರಕವಾಗಿದೆ. ಜಪ್ತು ಮಾಡಿದ ಮದ್ಯಸಾರದಲ್ಲಿ 66.1 ಓ.ಪಿ. ಮದ್ಯಸಾರದ ಅಂಶವಿದ್ದು ರಸಾಯನಿಕ ವಿಶ್ಲೇಷಣೆಯ ವರದಿಯಿಂದ ದೃಢಪಟ್ಟಿರುತ್ತದೆ. ಸಾಕ್ಷಿದಾರರ ಸಾಕ್ಷಿದಿಂದಲೂ ಹಾಗೂ ಹಾಜರುಪಡಿಸಿದ ದಾಖಲಾತಿಗಳಿಂದಲೂ ಜಪ್ತು ಮಾಡಿಕೊಂಡ ವಾಹನ ಸಂಖ್ಯೆ: ಕೆಎ:29:ಎಂ:1720 ನೇದ್ದನ್ನು ನಕಲಿ ಮದ್ಯ ತಯಾರಿಕೆಗಾಗಿ ದಿನಾಂಕ: 29.09.2003 ರಂದು ವಾಹನದಲ್ಲಿ ಓರಿಜಿನಲ್ ಚಾಯ್ಸ್ ವಿಸ್ಕಿ ಅಂತ ಬರೆದ ನಕಲಿ ಲೇಬಲ್‌ಗಳು 700 ಮತ್ತು ಓರಿಜಿನಲ್ ಚಾಯ್ಸ್ ಜಾನ್ ಡಿಸ್ಟಿಲರಿ ಲಿ., ಅಂತ ಬರೆದ ಬಾಟಲಿಯ ಮೇಲೆ ಮುಚ್ಚುವ ತಗಡು ಬೂಚಗಳು 700, ನಕಲಿ ಭದ್ರತಾ ಚೀಟಿಗಳು 500ಗಳಲ್ಲಿ ವಾಹನದಲ್ಲಿ ಇಟ್ಟು ಸಿಕ್ಕಿಬಿದ್ದಿರುವ ಸ್ಪಷ್ಟವಾಗಿ ಸಾಬೀತಾಗಿದೆ. ಅಲ್ಲದೇ ಅರ್ಜಿದಾರನು ಅಭಿಯೋಜನೆಯ ಪರ ಸಾಕ್ಷಿಯನ್ನು ನುಡಿದ ಸಾಕ್ಷಿದಾರರ ಪಾಟೀ ಸವಾಲಿನಲ್ಲಿಯೂ ಕೂಡಾ ಸದರಿ ವಾಹನದಲ್ಲಿ ಲೇಬಲ್‌ಗಳು, ಬೂಚಗಳು, ಭದ್ರತಾ ಪತ್ರಗಳು ಇರಲಿಲ್ಲ ಎಂಬುದನ್ನು ತೋರಿಸಲು ಯಾವುದೇ ಅಂಶಗಳನ್ನು ಸಾಕ್ಷಿದಾರರಿಂದ ನುಡಿಸಿರುವುದಿಲ್ಲ.

**ಎರಡನೆಯ ವಿವಾದಾಂಶಕ್ಕೆ ಉತ್ತರ ಇಲ್ಲ**

ವಾಹನದಲ್ಲಿ ಮಾಲೀಕರು ತನ್ನ ಪರ ಮೂರು (3) ಜನರ ಸಾಕ್ಷಿಯನ್ನು ನುಡಿಸಿರುವರು. ಆದರೆ ಒಬ್ಬರ ಸಾಕ್ಷಿಯು ಇನ್ನೊಬ್ಬರ ಸಾಕ್ಷಿಗೆ ಪೂರಕವಾಗಿರದೇ ಬೇರೆ ಬೇರೆ ವಿಷಯಗಳ ಬಗ್ಗೆ ಕೇವಲ ತಮ್ಮ ವಾಹನವನ್ನು ಬಿಡಿಸಿಕೊಳ್ಳಲು ಡಬ್ಲ್ಯೂ-2 ತನ್ನ ಸಾಕ್ಷಿಯಲ್ಲಿ ಅಂದು ಬಂದ ಪೊಲೀಸರು ಯಾವ ಠಾಣೆಗೆ ಸಂಬಂಧಿಸಿದವರು ಹೇಳಲು ಬರುವುದಿಲ್ಲವೆಂದು ಪಾಟೀ ಸವಾಲಿನಲ್ಲಿ ನುಡಿದಿದ್ದನ್ನು ನಂಬಲಾಗುವುದಿಲ್ಲ. ಇವರೆಲ್ಲರೂ ಕನ್ನೂರ ಗ್ರಾಮದಿಂದ ಪೊಲೀಸರ ಸಂಗಡ ಬಿಜಾಪುರದವರೆಗೆ ಒಂದೇ ವಾಹನದಲ್ಲಿ ಪ್ರಯಾಣಿಸಿದಾಗಿದ್ದಲ್ಲಿ ಕಡೆಯ ಪಕ್ಷ ಯಾವ ಪೊಲೀಸ್ ಠಾಣೆಯ ಪೊಲೀಸರು ತಮ್ಮನ್ನು ಕರೆದುಕೊಂಡು ಹೋಗುತ್ತಿರುವರು ಎಂಬುದರ ಬಗ್ಗೆ ಸಹಜವಾಗಿಯೇ ಪ್ರತಿಯೊಬ್ಬರರು ವಿಚಾರಿಸಬಹುದಾಗಿತ್ತು. ಡಿ.ಡಬ್ಲ್ಯೂ-2 ಆ ದಿನ ತಾನು ರಾಜು ಗೌಂಡಿ, ಶಂಕರ ಕಾತರಕಿ, ವಾಹನದ ಮಾಲೀಕ ಪರಮಗೊಂಡ ಗಾಂಧಿಚೌಕ ಬಳಿ ಇಳಿದುಕೊಂಡೆವೆಂದು ಸಾಕ್ಷಿ ನುಡಿದಿದ್ದು ಆದರೆ ಡಿ.ಡಬ್ಲ್ಯೂ-3 ತಮ್ಮ ಮುಖ್ಯ ವಿಚಾರಣೆಯಲ್ಲಿ ನಮ್ಮನ್ನು ಆ ವಾಹನದಲ್ಲಿ ಕೂಡಿಸಿಕೊಂಡು ಪೊಲೀಸರು ಬಿಜಾಪುರಕ್ಕೆ ಬಂದರು. ಬಿಜಾಪುರ ಗಾಂಧಿಚೌಕದಲ್ಲಿ ನಾನು ನನ್ನ ಜೊತೆ ಬಂದ ಎಲ್ಲರನ್ನು ಇಳಿಸಿ ಡ್ರೈವರ್‌ನೊಂದಿಗೆ ಎಕ್ಸೈಜ್ ಡಿಪಾರ್ಟ್‌ಮೆಂಟ್ ಜನರು ತಮ್ಮ ಕಛೇರಿಗೆ ತೆಗೆದುಕೊಂಡು ಹೋಗುತ್ತೇವೆ ಅಂತ ಹೇಳಿದರೆಂದು ನಾವೇನು ವಿಚಾರ ಮಾಡದೇ ಬಸ್ಸಿನಲ್ಲಿ ಊರಿಗೆ ಹೋದೆ ಎಂದು ಅರ್ಜಿದಾರರು ಸಾಕ್ಷಿ ನುಡಿದಿದ್ದು ಇವರ ಸಾಕ್ಷಿಯನ್ನು ನಂಬಲು ಅರ್ಹವಾಗಿರುವುದಿಲ್ಲ. ಡಿ.ಡಬ್ಲ್ಯೂ-1 ಅಥವಾ ಡಿ.ಡಬ್ಲ್ಯೂ-2 ತಮ್ಮ ಸಾಕ್ಷಿಯಲ್ಲಿ ಎಕ್ಸೈಜ್ ಡಿಪಾರ್ಟ್‌ಮೆಂಟ್ ಜನರು ಇದ್ದ ಬಗ್ಗೆ ಹುಟ್ಟಿಸಿ ತಮ್ಮ ವಾಹನದ ಬಿಡುಗಡೆಗಾಗಿ ಸಾಕ್ಷಿ ನುಡಿಯುತ್ತಿರುವುದು ಕಂಡುಬರುತ್ತದೆ. ಅಲ್ಲದೇ ಅರ್ಜಿದಾರರು ತಮ್ಮ ವಾಹನವನ್ನು ತನ್ನ ಮಗ ರಾಜು ಎನ್ನುವವರು ಚಲಿಸುತ್ತಿದ್ದರೆಂದು ಸಾಕ್ಷಿ ನುಡಿದಿರುವರು.

ನಿಯಮ 43(ಬಿ) (2) ರನ್ವಯ ಸ್ವತಃ ವಾಹನದ ಮಾಲೀಕ ಅಥವಾ ಅವರ ಪ್ರತಿನಿಧಿ ಮತ್ತು ವಾಹನ ಯಾರ ವಶದಲ್ಲಿತ್ತೋ ಆತನು ವಿವರಗಳು ವಾಹನದಲ್ಲಿ ಮದ್ಯ ಅಥವಾ ಅಮಲಿನ ಪದಾರ್ಥ ಸಾಗಾಣಿಕೆಯಾಗಿರುವುದರ ಬಗ್ಗೆ ತಮ್ಮಗಳ ಗಮನಕ್ಕೆ ಬಾರದೇ ಅಥವಾ ಶಾಮೀಲಾಗದೇ ಈ ಕೃತ್ಯವು ಸಂಭವಿಸಿದೆ. ಮತ್ತು ಇಂತಹ ಉಪಯೋಗದ ವಿರುದ್ಧ ತಾವು ಪ್ರತಿಯೊಬ್ಬರು ಎಲ್ಲ ರೀತಿಯ ಸಕಾರಣವಾದ ಮತ್ತು ಅಗತ್ಯವಾದ ಮಂಜೂರಾತಿಯನ್ನು ತೆಗೆದುಕೊಂಡಿರುವುದರ ಬಗ್ಗೆ ಪ್ರಾಧಿಕೃತ ಅಧಿಕಾರಿಗಳಿಗೆ ತೃಪ್ತಿಕರವಾಗಿ ಸಾಭೀತು ಪಡಿಸಬೇಕಾಗಿರುತ್ತದೆ. ಆದರೆ ವಾಹನ ಮಾಲೀಕರು ತಮ್ಮ ಹೇಳಿಕೆಯಿಂದಾಗಲೀ ಅಥವಾ ಸಾಕ್ಷ್ಯಾಧಾರಗಳಿಂದಾಗಲೀ ತಮ್ಮ ಹೊಣೆಗಾರಿಕೆಯನ್ನು ಈ ಪ್ರಾಧಿಕಾರಕ್ಕೆ ತೃಪ್ತಿಕರವಾಗಿ ಸಾಭೀತು ಪಡಿಸಿರುವುದಿಲ್ಲ.

**ಮೂರನೇ ವಿವಾದಾಂಶಕ್ಕೆ ಉತ್ತರ ಹೌದು**

ಮೊದಲನೆಯ ಮತ್ತು ಎರಡನೆಯ ವಿವಾದಾಂಶದಿಂದ ಪಡೆದ ಉತ್ತರದಿಂದ ಪ್ರಕರಣದಲ್ಲಿ ಜಪ್ತು ಮಾಡಲ್ಪಟ್ಟ ವಾಹನವು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿ ಕಂಡುಬಂದಿರುವುದರಿಂದ ಈ ಕೆಳಕಂಡಂತೆ ಆದೇಶ.

**ಆದೇಶ**

ಶ್ರೀ ಕೆ.ಆರ್. ಗೌಡ್ರ, ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು ಇ.ಐ.ಬಿ. ಬಿಜಾಪುರ ಜಿಲ್ಲೆ, ಬಿಜಾಪುರ ಆದ ನಾನು, ಕರ್ನಾಟಕ ಅಬಕಾರಿ ಅಧಿನಿಯಮ 1965ರ ನಿಯಮ 43(ಎ) ನಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ನಿಯಮ 43(ಎ)2 ರನ್ವಯ ಅಬಕಾರಿ ಉಪ ನಿರೀಕ್ಷಕರು ಬಿಜಾಪುರ ಉಪವಿಭಾಗ ಬಿಜಾಪುರ ಇವರ ಗುನ್ಹೆ ನಂಬರ್: 16/ 2003-04 ರಲ್ಲಿ ಜಪ್ತು ಮಾಡಲ್ಪಟ್ಟ ವಾಹನ ನಂಬರ್ ಕೆಎ:29:ಎಂ:1720 (ಟೆಂಪೊ ಟ್ರ್ಯಾಕ್ಸ್)ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿದ್ದೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ:13.02.2006 ರಂದು ಶೀಘ್ರಲಿಪಿಗಾರರಿಗೆ ಉಕ್ತಲೇಖನ ಕೊಟ್ಟು ಗಣಕ ಯಂತ್ರದಲ್ಲಿ ಬೆರಳಚ್ಚು ಮಾಡಿದ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಅಮಲಿನಲ್ಲಿ ಬರುವುದು.

**ಕೆ.ಆರ್. ಗೌಡ್ರ**
ಪ್ರಾಧೀಕೃತ ಅಧಿಕಾರಿ ಹಾಗೂ
ಅಬಕಾರಿ ಅಧೀಕ್ಷಕರು ಇ.ಐ.ಬಿ.
ಬಿಜಾಪುರ ಜಿಲ್ಲೆ, ಬಿಜಾಪುರ.

**ಅನುಬಂಧ-1**

ಫಿರ್ಯಾಧಿದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ

| | | |
|---|---|---|
| ಪ್ರಾ.ಸಾ-1 | ಹನುಮಂತರಾವ್ ತಂದೆ: ಗುಂಡುರಾವ್ ಕುಲಕರ್ಣಿ<br>ಅಬಕಾರಿ ಉಪ ನಿರೀಕ್ಷಕರು ಬಿಜಾಪುರ ಉಪವಿಭಾಗ, ಬಿಜಾಪುರ. | ತನಿಖಾಧಿಕಾರಿ |
| ಪ್ರಾ.ಸಾ-2 | ಮಲ್ಲಪ್ಪ ಭೀಮಪ್ಪ ಹಳ್ಳದಮನಿ<br>ಅಬಕಾರಿ ನಿರೀಕ್ಷಕರು ಜಾರಿ ಮತ್ತು ತನಿಖೆ, ಬಿಜಾಪುರ ಉಪವಿಭಾಗ, ಬಿಜಾಪುರ. | ತನಿಖಾಧಿಕಾರಿ |
| ಪ್ರಾ.ಸಾ-3 | ಲಕ್ಷ್ಮಣ ರಾಚಪ್ಪ ಕಂಬೂರ ಸಾ: ಬಿಜಾಪುರ | ಪಂಚರು |

**ಅನುಬಂಧ-2**

**ಫಿರ್ಯಾಧಿದಾರರ ಪರಮಂಡಿಸಲಾದ ದಾಖಲೆಗಳು**

| | |
|---|---|
| ನಿಶಾನೆ ಪಿ-1 | ಪಂಚನಾಮೆ |
| ನಿಶಾನೆ ಪಿ-1(ಎ) | ಪ್ರಾ.ಸಾ. -1 ರವರ ಸಹಿ |
| ನಿಶಾನೆ ಪಿ-1(ಬಿ) | ಪಂಚರ ಸಹಿ |
| ನಿಶಾನೆ ಪಿ-1 (ಸಿ) | ಪಂಚರ ಸಹಿ |
| ನಿಶಾನೆ ಪಿ-1(ಡಿ) | ಎ.ಎಸ್.ಐ. ರವರ ಸಹಿ |
| ನಿಶಾನೆ ಪಿ-2 | ಪ್ರಥಮ ವರ್ತಮಾನ ವರದಿ |
| ನಿಶಾನೆ ಪಿ-2 (ಎ) | ಪ್ರಾ.ಸಾ. -1 ರವರ ಸಹಿ |
| ನಿಶಾನೆ ಪಿ-3 | ದಿನಾಂಕ: 29.09.2003ರ ಪಂಚನಾಮೆ |
| ನಿಶಾನೆ ಪಿ-3(ಎ) | ಪ್ರಾ.ಸಾ. -1ರವರ ಸಹಿ. |
| ನಿಶಾನೆ ಪಿ-3(ಬಿ) | ಪಂಚರ ಸಹಿ |
| ನಿಶಾನೆ ಪಿ-3(ಸಿ) | ಪಂಚರ ಸಹಿ |
| ನಿಶಾನೆ ಪಿ-4 | ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿದ ಮುಂದಿನ ತನಿಖೆ ವರದಿ ಪತ್ರ. |
| ನಿಶಾನೆ ಪಿ-4(ಎ) | ಪ್ರಾ.ಸಾ. -1 ರವರ ಸಹಿ |
| ನಿಶಾನೆ ಪಿ-5 | ಸರ್ಚ್ ಮೆಮೊ |
| ನಿಶಾನೆ ಪಿ-5(ಎ) | ಪ್ರಾ.ಸಾ. -1ರವರ ಸಹಿ. |
| ನಿಶಾನೆ ಪಿ-6 | ರಸಾಯನಿಕ ಪರೀಕ್ಷೆಗೆ ಕಳುಹಿಸಿದ ಮುಖ ಪತ್ರ. |
| ನಿಶಾನೆ ಪಿ-6(ಎ) | ಪ್ರಾ.ಸಾ. 2 ರವರ ಸಹಿ. |
| ನಿಶಾನೆ ಪಿ-7 | ರಸಾಯನಿಕ ತಜ್ಞರ ವರದಿ. |

**ಅನುಬಂಧ-3**

**ಫಿರ್ಯಾಧಿದಾರರ ಪರ ಗುರುತಿಸಲಾದ ವಸ್ತುಗಳು**

1) ಎಂ.ಓ-1 ರಿಂದ 5- ರಸಾಯನಿಕ ಮಾದಿರ ತೆಗೆದ ಐದು (5) ಸ್ಯಾಂಪಲ್ ಬಾಟಲ್‌ಗಳು.
6) ಎಂ.ಓ. -6 ನಕಲಿ ಲೆಬಲೆಗಳು.
7) ಎಂ.ಓ-7 ಬಾಟಲ್ ಮೇಲೆ ಮುಚ್ಚುವ 700 ತಗಡಿನ ಬೂಚ್‌ಗಳು.
8) ಎಂ.ಓ. -8 ನಕಲಿ ಭದ್ರತಾ ಚೀಟಿಗಳು.
9) ಎಂ.ಓ. -9 ವಾಹನ ನಂಬರ್ ಕೆಎ:29:ಎಂ:1720.

**ಅನುಬಂಧ-4**

**ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು.**

| | |
|---|---|
| ಡಿ.ಡಬ್ಲ್ಯೂ-1 | ಶಿವಾನಂದ ಗುರುಪಾದಪ್ಪ ಜುಳಜುಳಿ, ಹಾಲಿವಸ್ತಿ: ಕನ್ನೂರ. |
| ಡಿ.ಡಬ್ಲ್ಯೂ-2 | ದುಂಡಪ್ಪ ನಾಮದೇವ ಪೂಜಾರಿ, ಹಾಲಿವಸ್ತಿ: ಬಿದರಿ ತಾ: ಜಮಖಂಡಿ. |
| ಡಿ.ಡಬ್ಲ್ಯೂ-3 | ಪರಮಗೊಂಡ ತಂದೆ: ಕಲ್ಲಪ್ಪ ಜಮಖಂಡಿ, ಹಾಲಿವಸ್ತಿ: ಬಿದರಿ, ತಾ: ಜಮಖಂಡಿ (ವಾಹನ ಮಾಲೀಕರು) |

**ಅನುಬಂಧ-5**

**ವಾಹನದ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು**

ಇಲ್ಲಾ.

**ಕೆ.ಆರ್. ಗೌಡ್ರ**
ಅಧಿಕೃತ ಅಧಿಕಾರಿ ಹಾಗೂ
ಅಬಕಾರಿ ಅಧೀಕ್ಷಕರು ಇ.ಐ.ಬಿ.
ಬಿಜಾಪುರ ಜಿಲ್ಲೆ, ಬಿಜಾಪುರ.

ಪಿ.ಆರ್.525

**ಪ್ರಾಧೀಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು ಇ.ಐ.ಬಿ. ಬಿಜಾಪುರ ಜಿಲ್ಲೆ, ಬಿಜಾಪುರ ರವರ ಕಛೇರಿ ನಡುವಳಿಗಳು**

**ಗುನ್ನೆ ನಂ.241/ 2001, ದಿನಾಂಕ:16ನೇ ಜುಲೈ, 2001**

**ಪೊಲೀಸ್ ಸಬ್‌ಇನ್ಸ್‌ಪೆಕ್ಟರ್ ಗಾಂಧಿಚೌಕ ಪೊಲೀಸ್‌ಠಾಣೆ, ಬಿಜಾಪುರ**

**ನಂ.ಇಎಕ್ಸ್‌ಇ: ಸಿಆರ್‌ಎಂ:16:/ 2001-02, ದಿನಾಂಕ:3ನೇ ಫೆಬ್ರವರಿ, 2006**

**ಉಪಸ್ಥಿತರು:** ಕೆ.ಆರ್. ಗೌಡ್ರ, ಪ್ರಾಧೀಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇ.ಐ.ಬಿ. ಬಿಜಾಪುರ ಜಿಲ್ಲೆ, ಬಿಜಾಪುರ.

**ಫಿರ್ಯಾಧಿದಾರರು:**

ಪೊಲೀಸ್ ಸಬ್ ಇನ್ಸ್‌ಪೆಕ್ಟರ್, ಗಾಂಧಿಚೌಕ ಪೊಲೀಸ್ ಠಾಣೆ, ಬಿಜಾಪುರ.

**ವಿರುದ್ಧ**

**ಆರೋಪಿತರು:**

1. ಸುಜಿತ ತಂದೆ ವಿಜಯಸಿಂಗ್ ರಘುವಂಶಿ, ಸಾ: ಇಂಧೋರ ಮದ್ಯಪ್ರದೇಶ.
2. ಮಹೇಶ ಯಾದವ ಉರ್ಫ್: ನಾನರಾಮ ಯಾಧವ, (ಟ್ರಕ್ ಕ್ಲೀನರ್) ಸಾ: ಇಂಧೋರ, ಮದ್ಯಪ್ರದೇಶ.
3. ಕಮಲಸಿಂಗ್ ಬಿನ್ ಜೇನಸಿಂಗ್ (ವಾಹನ ಮಾಲೀಕರು) ಸಾ: ಇಂಧೋರ, ಮದ್ಯಪ್ರದೇಶ.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:16.07.2001 ರಂದು ಮಧ್ಯಾಹ್ನದ ವೇಳೆಯಲ್ಲಿ ಫಿರ್ಯಾಧಿದಾರರಾದ ಆರಕ್ಷಕ ಉಪ ನಿರೀಕ್ಷಕರು ಸಂಚಾರಿ ಠಾಣಾ ಬಿಜಾಪುರ ರವರಿಗೆ ಬಂದ ಭಾತ್ಮಿಯ ಪ್ರಕಾರ ಅವರು ತಮ್ಮ ಸಿಬ್ಬಂದಿಯೊಂದಿಗೆ ಬಿಜಾಪುರದಲ್ಲಿರುವ ಜಮಖಂಡಿ ಕ್ರಾಸ್ ಹತ್ತಿರ ಹೋದಾಗ ಬಬಲೇಶ್ವರ ಕಡೆಯಿಂದ ಬಂದಂತಹ ಲಾರಿ ನಂ. ಎಂಪಿ:09:ಕೆ:7011ನೇದ್ದನ್ನು ನಿಲ್ಲಿಸಲು ಪ್ರಯತ್ನಿಸಿದರೂ ಕೂಡಾ ಚಾಲಕನು ಹಾಗೆಯೇ ವಾಹನವನ್ನು ಮುಂದೆ ತೆಗೆದುಕೊಂಡು ಹೊರಟಿದ್ದರಿಂದ ಬೆನ್ನು ಹತ್ತಿ ನಿಲ್ಲಿಸಿ ತಪಾಸಿಸಲಾಗಿ ವಾಹನದಲ್ಲಿ ರಹದಾರಿ ಪತ್ರ ಇಲ್ಲದೇ ತಲಾ 200 ಲೀ. ನ 60 ಪ್ಲಾಸ್ಟಿಕ್ ಬ್ಯಾರಲ್‌ಗಳಲ್ಲಿ ಮದ್ಯಸಾರವನ್ನು ಒಯ್ಯುತ್ತಿರುವುದನ್ನು ಕಂಡು ಕಾನೂನಿನ್ವಯ ಪಂಚರ ಸಮಕ್ಷಮದಲ್ಲಿ ವಾಹನವನ್ನು 60 ಪ್ಲಾಸ್ಟಿಕ್ ಬ್ಯಾರಲ್‌ಗಳನ್ನು ಜಪ್ತು ಮಾಡಿಕೊಂಡಿರುವರು. ನಂತರ ಗುನ್ನೆ ನಂಬರ್: 241/ 2001ರನ್ವಯ ದಿನಾಂಕ: 16.07.2001ರಂತೆ ಪ್ರಥಮ ವರ್ತಮಾನ ವರದಿಯನ್ನು ನ್ಯಾಯಾಲಯಕ್ಕೆ ಕಳುಹಿಸಿರುವರು. ಸದರಿ 60 ಪ್ಲಾಸ್ಟಿಕ್ ಬ್ಯಾರಲ್‌ಗಳನ್ನು ಜಪ್ತು ಮಾಡಿಕೊಳ್ಳುವ ಸಮಯದಲ್ಲಿ ತೆಗೆದಂಥಹ ಮಾದರಿಯನ್ನು ನ್ಯಾಯ ವಿಜ್ಞಾನ ಪ್ರಯೋಗ ಶಾಲಾ ಬೆಂಗಳೂರು ರವರಿಗೆ ಸಲ್ಲಿಸಿ ಅವರಿಂದ ವರದಿ ನಂಬರ್ ಸಿಎಸ್: 838/ 2001 ದಿನಾಂಕ: 19.09.2001ರಂತೆ ವರದಿಯನ್ನು ಪಡೆದುಕೊಂಡಿದ್ದು ಮಾದರಿ ಸೀಸೆಗಳಲ್ಲಿ ಮಾದಕ ದ್ರವ್ಯ ಶೇ.85ರಷ್ಟು ಮದ್ಯಸಾರದ ಅಂಶವು ಇರುವುದಾಗಿ ತಿಳಿಸಿರುವರು. ನಂತರ ಸಂಬಂಧಿಸಿದ ಎಲ್ಲಾ ದಾಖಲಾತಿಗಳೊಂದಿಗೆ ಹಾಗೂ ಜಪ್ತು ಮಾಡಿಕೊಂಡ ಲಾರಿ ನಂ. ಎಂಪಿ:09:ಕೆ:7011 ನ್ನು ಮತ್ತು 60 ಪ್ಲಾಸ್ಟಿಕ್ ಬ್ಯಾರಲ್‌ಗಳಲ್ಲಿನ ಒಟ್ಟು 12,000 ಲೀಟರ್ ಮದ್ಯಸಾರವನ್ನು ಅಬಕಾರಿ ಇಲಾಖೆಗೆ ಹಸ್ತಾಂತರಿಸಿರುತ್ತಾರೆ. ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಬಿಜಾಪುರ ಇಲ್ಲೆ, ಬಿಜಾಪುರ ಇವರ ಆದೇಶ ಸಂಖ್ಯೆ: ಇಎಕ್ಸ್‌ಇ:ಸಿಆರ್‌ಎಂ:16:2001-02, ದಿನಾಂಕ: 27.11.2001ರ ಮೇರೆಗೆ ಸದರಿ ಜಪ್ತು ಮಾಡಿದ 60 ಪ್ಲಾಸ್ಟಿಕ್ ಬ್ಯಾರಲ್‌ಗಳು ಹಾಗೂ ಅದರಲ್ಲಿದ್ದ 12,000 ಲೀಟರ್ ಮದ್ಯಸಾರವನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತಾರೆ. ಸದರಿ ಮುಟ್ಟುಗೋಲು ಹಾಕಿಕೊಂಡ 12,000 ಲೀಟರ್ ಮದ್ಯಸಾರವನ್ನು ಮೆ: ತೊರಗಲ್ ಡಿಸ್ಟಿಲರಿ (ಪ್ರಾ) ಲಿ., ತೊರವಿ ಅವರಿಗೆ ಹಂಚಿಕೆ ಮಾಡಿ ಮತ್ತು 60 ಪ್ಲಾಸ್ಟಿಕ್ ಖಾಲಿ ಬ್ಯಾರಲ್‌ಗಳನ್ನು ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಿರುತ್ತಾರೆ. ಮದ್ಯಸಾರ ಹಾಗೂ 60 ಪ್ಲಾಸ್ಟಿಕ್ ಖಾಲಿ ಬ್ಯಾರಲ್‌ಗಳಿಂದ ಬಂದಂಥಹ ಹಣವನ್ನು ಸರ್ಕಾರಕ್ಕೆ ಸಂದಾಯ ಮಾಡಿಸಿರುತ್ತಾರೆ. ಈ ಸಮಯದಲ್ಲಿ ಶ್ರೀ ಕಮಲಸಿಂಗ್ ಜೇನಸಿಂಗ್ ಸಾ: ಇಂಧೋರ ಮಧ್ಯಪ್ರದೇಶ ರವರು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಟ್ರಕ್ ನಂಬರ್ ಎಂಪಿ:09:ಕೆ:7011 ರ ಮಾಲೀಕನೆಂದು ದಿನಾಂಕ: 19.02.2002 ರಂದು ಈ ಪ್ರಾಧೀಕಾರದ ಮುಂದೆ ಒಂದು ಅರ್ಜಿಯನ್ನು ಸಲ್ಲಿಸಿ ತನ್ನ ಟ್ರಕ್ ಎಂಪಿ:09:ಕೆ:7011 ನೇದ್ದನ್ನು ಸಬ್ ಇನ್ಸ್‌ಪೆಕ್ಟರ್ ಗಾಂಧಿಚೌಕ ರವರು ಗುನ್ನೆ ನಂಬರ್ 241: 2001ರಲ್ಲಿ ದಿನಾಂಕ: 16.07.2001 ರಂದು ಜಪ್ತು ಮಾಡಿಕೊಂಡಿರುವರೆಂದು ತನ್ನ ಟ್ರಕ್ಕಿನಲ್ಲಿರುವ ವಾಹನ ಚಾಲಕನು ತನ್ನ ಫಾಯದೆಗೋಸ್ಕರ ಈ ಕೃತ್ಯವನ್ನು ಮಾಡಿದ್ದಾನೆಂದು, ಸದರಿ ಗುನ್ನೆಯಲ್ಲಿ ತಾವು ವಿಧಿಸಿದ ದಂಡ ಹಾಗೂ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಸದರಿ ವಾಹನಕ್ಕೆ ನಿಗದಿಪಡಿಸಿದ ಹಣವನ್ನು ಸಹ ಸರ್ಕಾರಕ್ಕೆ ತುಂಬಲು ಸಿದ್ಧನಿರುತ್ತೇನೆಂದು ಮತ್ತು ಗುನ್ನೆಯನ್ನು ಇಲಾಖಾ ವತಿಯಿಂದ ಇತ್ಯರ್ಥಪಡಿಸಲು ಕೋರಿರುತ್ತಾರೆ.

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಬಿಜಾಪುರ ಜಿಲ್ಲೆ, ಬಿಜಾಪುರ ಇವರುಗಳು ಸದರಿ ಪ್ರಕರಣದ ಬಗ್ಗೆ ವಿಚಾರಣೆಯನ್ನು ನಡೆಸಿ ಅಂತಿಮ ಆದೇಶವನ್ನು ದಿನಾಂಕ: 03.02.2003ರಂದು ಹೊರಡಿಸಿರುತ್ತಾರೆ. ಸದರಿ ಆದೇಶವನ್ನು ಸತ್ರ ನ್ಯಾಯಾಲಯ ಬಿಜಾಪುರದಲ್ಲಿ ಮೇಲ್ಮನವಿ ಸಲ್ಲಿಸಿದ್ದರಿಂದ ಮಾನ್ಯ ಸತ್ರ ನ್ಯಾಯಾಲಯ ಬಿಜಾಪುರ ಇವರು ಮರು ವಿಚಾರಣೆ ನಡೆಸಲು ಆದೇಶಿಸಿದ ಮೇರೆಗೆ ಈ ಪ್ರಾಧಿಕಾರವು ಮರು ವಿಚಾರಣೆಗಾಗಿ ತೆಗೆದುಕೊಳ್ಳಲಾಗಿದೆ. ಸದರಿ ವಾಹನದ ವಿಚಾರಣೆಯನ್ನು ನಿಗದಿಪಡಿಸಿದ ವಾಹನದ ಮಾಲೀಕರಿಗೆ ಹಾಗೂ ಅವರ ಪರ ವಕೀಲರುಗಳಿಗೆ ಮೇಲಿಂದ ಮೇಲೆ ನೋಟಿಸ್ ತೆಗೆದರು. ವಾಹನದ ಮಾಲೀಕರು ಹಾಜರಾಗಿರುವುದಿಲ್ಲ. ಸರ್ಕಾರದ ಪರವಾಗಿ ಸಹಾಯಕ ಅಭಿಯೋಗ ನಿರ್ದೇಶಕರು ಹಾಗೂ ಫಿರ್ಯಾಧಿದಾರರು ಹಾಗೂ ಪಂಚಸಾಕ್ಷಿದಾರರು ಹಾಜರಾಗಿದ್ದರಿಂದ ವಿಚಾರಣೆಯನ್ನು ಜರುಗಿಸಲಾಯಿತು.

ಪ್ರಾಸಿಕ್ಯೂಶನ್ ಪರವಾಗಿ ಒಟ್ಟು ನಾಲ್ಕು (4) ಜನರ ಸಾಕ್ಷ್ಯಗಳನ್ನು ಸಹಾಯಕ ಅಭಿಯೋಗ ನಿರ್ದೇಶಕರು ನುಡಿಸಿ ನಿಶಾನೆ ಪಿ-1 ರಿಂದ ನಿಶಾನೆ ಪಿ-4ನ್ನು ಗುರುತಿಸಿಕೊಂಡಿರುವರು. ವಾಹನದ ಮಾಲೀಕರು ಗೈರು ಹಾಜರಿ ಇರುವುದರಿಂದ ಯಾವುದೇ ಸಾಕ್ಷಿಯನ್ನು ನುಡಿಸಿರುವುದಿಲ್ಲ.

ಪ್ರಾಸಿಕ್ಯೂಶನ್ ಪರ ಸಾಕ್ಷಿ ನುಡಿದ ಪಿ.ಡಬ್ಲ್ಯೂ-1 ಇವರು ಸಾಕ್ಷಿ ನುಡಿಯುತ್ತಾ ದಿನಾಂಕ: 10.07.2000 ರಿಂದ 10.02.2001 ರವರೆಗೆ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ ಗಾಂಧಿಚೌಕ ಪೊಲೀಸ್ ಠಾಣೆಯಲ್ಲಿ ಕೆಲಸ ನಿರ್ವಹಿಸಿದ್ದೇನೆ. ದಿನಾಂಕ: 16.07.2001 ರಂದು ಸಾಯಂಕಾಲ 5.00 ಗಂಟೆಯ ಸುಮಾರಿಗೆ ಶ್ರೀ ಜೆ. ರಘು ಪೊಲೀಸ್ ಸಬ್ ಇನ್ಸ್‌ಪೆಕ್ಟರ್ ಟ್ರಾಫಿಕ್ ರವರು ಠಾಣೆಗೆ ಹಾಜರಾಗಿ ಒಂದು ಲಿಖಿತ ಫಿರ್ಯಾಧಿ ಮಾಲು ಜಪ್ತು ಪಂಚನಾಮೆ ಹಾಗೂ ಎರಡು (2) ಜನ ಆರೋಪಿತರನ್ನು ತಂದು ಹಾಜರುಪಡಿಸಿದ ಆಧಾರದ ಮೇಲೆ ಗಾಂಧಿಚೌಕ ಠಾಣೆ ಗುನ್ನಾ ನಂಬರ್: 241/ 2001, ಕಲಂ 32, 34 ಕರ್ನಾಟಕ ಅಬಕಾರಿ ಕಾಯ್ದೆನೇದ್ದರಲ್ಲಿ ದಾಖಲಿಸಿಕೊಂಡು ಪ್ರಥಮ ವರ್ತಮಾನದ ವರದಿಯನ್ನು ನ್ಯಾಯಾಲಯಕ್ಕೆ ಕಳುಹಿಸಿದ್ದೇನು. ಸದರಿ ಫಿರ್ಯಾಧಿ ಪ್ರತಿಯನ್ನು ನೋಡಿ ಅದನ್ನು ನಿಶಾನೆ ಪಿ-1, ಎಫ್.ಐ.ಆರ್. ಪ್ರತಿಯನ್ನು ನೋಡಿ ಗುರುತಿಸಿ, ಅದನ್ನು ನಿಶಾನೆ ಪಿ-2, ಎಂದು ಗುರುತಿಸಿಕೊಂಡಿರುವರು. ಪೊಲೀಸ್ ಸಬ್ ಇನ್ಸ್‌ಪೆಕ್ಟರ್ ರಘು ರವರು ತಾವು ವಶಪಡಿಸಿಕೊಂಡ ಲಾರಿ ನಂ.ಎಂಪಿ:09:ಕೆ 7011 ನೇದ್ದರ

ಹಾಗೂ ಸ್ಪಿರೀಟ್ ಇದ್ದ 60 ಬ್ಯಾರಲ್ ಸಹಿತ ಪಂಚನಾಮೆ ಆಧಾರಿತ ಮಾಲನ್ನು ನಮ್ಮ ವಶಕ್ಕೆ ಕೊಟ್ಟಿದ್ದರ ಮೇರೆಗೆ ತಾಬಾಕ್ಕೆ ತೆಗೆದುಕೊಂಡು ಸದರಿ ಮಾಲೀನ ಆಧಾರಿತ ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿದನು. ಸದರಿ ಪಂಚನಾಮೆಯ ಪ್ರತಿಯನ್ನು ನೋಡಿ ನಿಶಾನೆ ಪಿ-3 ಎಂದು ಗುರುತಿಸಿಕೊಂಡಿರುವರು. ಸದರಿ ಹಾಜರುಪಡಿಸಿದ ಲಾರಿ ನಂಬರ್: ಎಂಪಿ:09:ಕೆ:7011 ನೇದ್ದನ್ನು ಮುದ್ದೇಮಾಲು-1 ಎಂದು ಗುರುತಿಸಿರುವರು. ಹಾಜರುಪಡಿಸಿದ ಆರೋಪಿ (1) ಸುಜಿತ ವಿಜಯಸಿಂಗ್ ರಘುವಂಶಿ, (2) ಮಹೇಶ ನಾನಾರಾಮ ಯಾಧವ ರವರುಗಳನ್ನು ಪೊಲೀಸ್ ಮುಖಾಂತರ ನ್ಯಾಯಾಲಯದ ಮುಂದೆ ಹಾಜರುಪಡಿಸಿದೆನು. ಪಿ.ಸಿ. ನಂಬರ್:944, ವಿ.ಹೆಚ್. ಹತ್ತಳ್ಳಿ ರವರ ಹೇಳಿಕೆಯನ್ನು ಪಡೆದುಕೊಂಡೆನು. ನಂತರ ದಿನಾಂಕ: 19.07.2001 ರಂದು ಲಾರಿ ನಂ.ಎಂಪಿ:09:ಕೆ:7011 ಹಾಗೂ 60 ಬ್ಯಾರಲ್ ಸ್ಪಿರೀಟ್ ಅಬಕಾರಿ ಇಲಾಖೆಯ ಅಬಕಾರಿ ಇನ್ಸ್‌ಪೆಕ್ಟರ್ ರವರಿಗೆ ಮುಂದಿನ ಕ್ರಮ ಕುರಿತು ಒಪ್ಪಿಸಿದೆನು. ದಿನಾಂಕ: 27.07.2001 ರಂದು ಸ್ಪಿರೀಟ್ ಜಪ್ತಾದ ಸ್ಯಾಂಪಲನ್ನು ತಜ್ಞರ ಅಭಿಪ್ರಾಯಕ್ಕಾಗಿ ಬೆಂಗಳೂರು ಪ್ರಯೋಗಾಲಯಕ್ಕೆ ಕಳುಹಿಸಿದೆನು. ಪಿ.ಸಿ. ನಂಬರ್:930, ಮುಖಾಂತರ ದಿನಾಂಕ: 19.09.2001ರಂದು ಬೆಂಗಳೂರಿನಿಂದ ತಜ್ಞರ ಅಭಿಪ್ರಾಯ ತರಿಸಿಕೊಂಡೆನು. ಸದರಿ ರಸಾಯನಿಕ ತಜ್ಞರ ವರದಿಯ ಪ್ರತಿಯನ್ನು ಈಗ ನೋಡಿ ಗುರುತಿಸಿದ್ದರಿಂದ ಅದನ್ನು ನಿಶಾನೆ ಪಿ-4 ಎಂದು ಗುರುತಿಸಲಾಗಿದೆ. ನಂತರ ಎಲ್ಲ ಕಡತವನ್ನು ಪರಿಶೀಲಿಸಿ ಆರೋಪಿತರ ವಿರುದ್ಧ ಪುರಾವೆಗಳಿದ್ದ ಕಾರಣ ಆರೋಪಿಗಳಿಬ್ಬರ ವಿರುದ್ಧ ದೋಷಾರೋಪಣೆ ಪಟ್ಟಿಯನ್ನು ಸಲ್ಲಿಸಿರುವೆನೆಂದು ಸಾಕ್ಷಿ ನುಡಿದಿರುತ್ತಾರೆ. ವಾಹನದ ಮಾಲೀಕರಾಗಲಿ ಅಥವಾ ಅವರ ಪರ ವಕೀಲರಾಗಲೀ ಗೈರು ಹಾಜರ ಇರುವುದರಿಂದ ಇವರ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಲಾಯಿತು.

ಪಿ.ಡಬ್ಲ್ಯೂ-2 ವಿವೇಕಾನಂದ ಹನುಮಂತ್ರಾಯ ಹತ್ತಳ್ಳಿ ತಮ್ಮ ಸಾಕ್ಷಿಯಲ್ಲಿ ಸನ್ 1998 ರಿಂದ ಸನ್ ಮೇ 2005 ರವರೆಗೆ ನಾನು ಸಂಚಾರಿ ಪೊಲೀಸ್ ಠಾಣೆ ಬಿಜಾಪುರದಲ್ಲಿ ಕಾರ್ಯ ನಿರ್ವಹಿಸಿದ್ದೇನೆ. ದಿನಾಂಕ: 15.07.2001 ರಂದು ನಾನು ಠಾಣೆಯಲ್ಲಿ ಕರ್ತವ್ಯದಲ್ಲಿ ಇದ್ದಾಗ ನಮ್ಮ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ ಸ್ಪಿರೀಟ್ ತುಂಬಿದ ಬ್ಯಾರಲ್‌ಗಳು ಹುಬ್ಬಳ್ಳಿ ಕಡೆಗೆ ಹೊರಟ ಬಗ್ಗೆ ಭಾತ್ಮಿ ಬಂದಿದೆ ಎಂದು ತಿಳಿಸಿ ನಮ್ಮನ್ನು ತಮ್ಮ ಜೊತೆಯಲ್ಲಿ ಕರೆದುಕೊಂಡು ಬಿಜಾಪುರದ ಜಮಖಂಡಿ ಕ್ರಾಸ್‌ನಲ್ಲಿ ರಸ್ತೆ ಕಾವಲು ಮಾಡುತ್ತಿದ್ದೇವು. ನಮ್ಮ ಜೊತೆಯಲ್ಲಿ ಸಿ.ಪಿ.ಐ. ರವರು ಸಹ ಇದ್ದರು. ಆಗ ಮಧ್ಯಾಹ್ನ 3.30 ಗಂಟೆಯ ಸುಮಾರಿಗೆ ಒಂದು ಲಾರಿ ಬಬಲೇಶ್ವರ ನಾಕಾ ಕಡೆಯಿಂದ ಅತೀ ಜೋರಿನಿಂದ ಬರುತ್ತಿರುವುದನ್ನು ಕಂಡು ಸಂಶಯದಿಂದ ಅದನ್ನು ಕೈ ಮಾಡಿ ನಿಲ್ಲಿಸಿದೆವು. ಲಾರಿ ನಂಬರ್ ನೋಡಲಾಗಿ ಎಂಪಿ:09:ಕೆ:7011 ಅಂತ ಇತ್ತು. ಅದರಲ್ಲಿ ಇಬ್ಬರು ವ್ಯಕ್ತಿಗಳಿದ್ದು ಚಾಲಕ ತನ್ನ ಹೆಸರು ಸುಜೀತ ವಿಜಯಸಿಂಗ್ ರಘುವಂಶಿ ಸಾ: ಇಂಧೋರ ಅಂತಾ ಇನ್ನೊಬ್ಬ ಮಹೇಶ ನಾನಾರಾಮ ಯಾಧವ ಸಾ: ಇಂಧೋರ ಅಂತ ಹೇಳಿದಾ ಲಾರಿಯಲ್ಲಿ ಏನಿದೆ ಎಂದು ವಿಚಾರಿಸಲಾಗಿ ಅವರು ಸಮರ್ಪಕ ಉತ್ತರಗಳನ್ನು ನೀಡಲಿಲ್ಲ. ಸಂಶಯ ಬಂದು ಲಾರಿಯ ಮೇಲೆ ಹಾಕಲಾದ ಟಾರಫಲ್ (ತಾಡಪತ್ರಿ) ಬಿಚ್ಚಿ ನೋಡಲಾಗಿ ಲಾರಿಯಲ್ಲಿ 60 ಪ್ಲಾಸ್ಟಿಕ್ ಬ್ಯಾರಲ್‌ಗಳಿದ್ದು ಅವುಗಳಿಗೆ ಮುಚ್ಚಳ ಇದ್ದದ್ದು ಕಂಡುಬಂದಿತು. ಮುಚ್ಚಳ ತೆಗೆದು ನೋಡಲಾಗಿ ಅವುಗಳಲ್ಲಿ ಸ್ಪಿರಿಟ್ ಇದ್ದದ್ದು ಕಂಡಿತು. ಸದರಿ ವಾಹನ ಚಾಲಕನಿಗೆ ಈ ಸ್ಪಿರೀಟನ್ನು ಸಾಗಿಸಲು ಏನಾದರೂ ಕಾಗದ ಪತ್ರಗಳು ಇವೆ ಎಂದು ವಿಚಾರಿಸಲಾಗಿ ಇಲ್ಲ ಎಂದು ಹೇಳಿದ. ನಂತರ ಪಂಚರನ್ನು ಕರೆಯಿಸಿ ಅವರ ಸಮಕ್ಷಮದಲ್ಲಿ ನಮ್ಮ ಸಾಹೇಬರು 60 ಬ್ಯಾರಲ್‌ಗಳಿಂದ ಒಂದು ಬಾಟಲಿಯಂತೆ 60 ಬಾಟಲ್‌ಗಳಲ್ಲಿ ಸ್ಯಾಂಪಲ್‌ಗಳನ್ನು ತೆಗೆದು ಅವುಗಳನ್ನು ಸೀಲು ಮಾಡಿ ಚೀಟಿಗಳನ್ನು ಅಂಟಿಸಿದರು. ಆ ಬಳಿಕ ಸವಿಸ್ತಾರವಾದ ಪಂಚನಾಮೆಯನ್ನು ಬರೆದು 60 ಬ್ಯಾರಲ್‌ಗಳನ್ನು ಹಾಗೂ ಲಾರಿ ನಂಬರ್: ಎಂಪಿ:09:ಕೆ:7011 ನೇದ್ದನ್ನು ಜಪ್ತು ಮಾಡಿ ತಮ್ಮ ತಾಬಾಕ್ಕೆ ತೆಗೆದುಕೊಂಡರು. ಸದರಿ ಜಪ್ತು ಮಾಡಿದ ಲಾರಿ ನಂಬರ್: ಎಂಪಿ:09:ಕೆ:7011 ನೇದ್ದನ್ನು ನೋಡಿ ಅದೇ ಇದಾಗಿದೆ ಎಂದು ಅದನ್ನು ಈಗಾಗಲೇ ಮುದ್ದೇಮಾಲು-1 ಎಂದು ಗುರುತಿಸಲಾಗಿದೆ. ಲಾರಿ ಚಾಲಕನಿಗೆ ವಾಹನ ಮಾಲೀಕನ ಬಗ್ಗೆ ವಿಚಾರಿಸಲಾಗಿ ತಮ್ಮ ಮಾಲೀಕರು ಇಂಧೋರದಲ್ಲಿ ಇರುತ್ತಾರೆ ಎಂದು ಹೇಳಿದನು. ಮತ್ತು ಸ್ಪಿರೀಟನ್ನು ಈ ವಾಹನದ ಮಾಲೀಕರಿಗೆ ತಿಳಿದಿದೆಯೋ ಅಥವಾ ಇಲ್ಲವೋ ಎಂದು ನಮ್ಮ ಅಧಿಕಾರಿಗಳು ಕೇಳಲಾಗಿ ಸದರಿ ಸ್ಪಿರಿಟ್‌ನ್ನು ಮಾಲೀಕರ ಆದೇಶದ ಮೇರೆಗೆ ತಂದಿರುವುದಾಗಿ ಸಾಕ್ಷಿ ನುಡಿದಿರುವರು. ವಾಹನದ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲಿ ಈ ಸಾಕ್ಷಿಯನ್ನು ಪಾಟೀ ಮಾಡಲು ಹಾಜರು ಇಲ್ಲದ ಕಾರಣ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಲಾಗಿದೆ.

ಪಿ.ಡಬ್ಲ್ಯೂ-3 ಮಲ್ಲಪ್ಪ ಕುಂಬಾರ, ತನ್ನ ಸಾಕ್ಷಿಯಲ್ಲಿ ಸನ್ 2001ನೇ ಇಸ್ವಿಯಲ್ಲಿ ನನ್ನನ್ನು ಮತ್ತು ಮುದಕಪ್ಪಾ ಕಲ್ಲೂರು ಎಂಬಾತನನ್ನು ಪೊಲೀಸ್ ಅಧಿಕಾರಿಗಳು ಬಿಜಾಪುರದಲ್ಲಿ ಜಮಖಂಡಿ ಕ್ರಾಸ್‌ನ ಹತ್ತಿರ ಕರೆಯಿಸಿದ್ದರು. ಅಲ್ಲಿ ಅವರು ಒಂದು ಲಾರಿಯನ್ನು ಹಿಡಿದು ನಿಲ್ಲಿಸಿದ್ದರು. ಪೊಲೀಸ್ ಅಧಿಕಾರಿಗಳು ಟ್ರಕ್‌ನಲ್ಲಿದ್ದ ಸ್ಪಿರೀಟ್ ಬ್ಯಾರಲ್‌ಗಳಿಗೆ ಪರಿಶೀಲಿಸಿ ಪಂಚನಾಮೆಗೆ ಸಹಕರಿಸಲು ಕೋರಿದರು. ಆ ಅನ್ವಯ ನಾವು ಒಪ್ಪಿಕೊಂಡು ಸದರಿ ಟ್ರಕ್ಕನ್ನು ನೋಡಲಾಗಿ ಅದು ಎಂಪಿ.:09:ಕೆ:7011 ಅಂತ ನಂಬರ್ ನಮೂದಿಸಲಾಗಿದ್ದು, ಅದರ ಒಳಗಡೆ ಏನಿದೆ ಅಂತ ವಿಚಾರಿಸಿ ತಾಡಪತ್ರಿಯನ್ನು ತೆಗೆದು ನೋಡಲಾಗಿ ಅಲ್ಲಿ 60 ಬ್ಯಾರಲ್‌ಗಳು ಇದ್ದವು ಅವುಗಳ ಮುಚ್ಚಳ ತೆಗೆಯಿಸಿ ನೋಡಲಾಗಿ ಅವುಗಳಲ್ಲಿ ಸ್ಪಿರೀಟ್ ತುಂಬಿದ್ದು ಇತ್ತು. ಪೊಲೀಸ್ ಅಧಿಕಾರಿಗಳು ಪ್ರತಿಯೊಂದು ಬ್ಯಾರಲ್‌ನಿಂದ ಪ್ರತ್ಯೇಕವಾದ ಬಾಟಲ್‌ಗಳಲ್ಲಿ ರಸಾಯನಿಕ ಪರೀಕ್ಷೆಗಾಗಿ ಸ್ಪಿರೀಟ್‌ನ್ನು ತೆಗೆದು ಸೀಲು ಮಾಡಿ ನಮ್ಮ ವ ಅಧಿಕಾರಿಗಳು ಸಹಿ ಮಾಡಿದ ಚೀಟಿಗಳನ್ನು ಅಂಟಿಸಿದರು. ಅವುಗಳಲ್ಲಿ ಸ್ಪಿರೀಟ್ ಸುಮಾರು ಐದು ಲಕ್ಷ ರೂಪಾಯಿದ್ದಾಗುತ್ತದೆ ಅಂತ ತಿಳಿಸಿದರು. ಸದರಿ ಟ್ರಕ್ಕಿಗೆ ಸಂಬಂಧಿಸಿದವರು ಇಬ್ಬರು ಜನರಿದ್ದು ಚಾಲಕ ಮತ್ತು ಕ್ಲೀನರ್ ತಮ್ಮ ಹೆಸರುಗಳನ್ನು ಹೇಳಿದರು. ಅಧಿಕಾರಿಗಳು ಸದರಿ ಟ್ರಕ್ಕನ್ನು ಮತ್ತು ಅದರಲ್ಲಿರುವ 60 ಬ್ಯಾರಲ್‌ಗಳನ್ನು ನಮ್ಮ ಸಮಕ್ಷಮದಲ್ಲಿಯೇ ಪಂಚನಾಮೆ ಬರೆದು ಜಪ್ತು ಮಾಡಿ ತಮ್ಮ ತಾಬಾಕ್ಕೆ ತೆಗೆದುಕೊಂಡರು. ಸದರಿ ದಿನದಂದು ಬರೆದ ಪಂಚನಾಮೆಯನ್ನು ಈಗ ನೋಡುತ್ತಿದ್ದು ಅದನ್ನು ನಿಶಾನೆ ಪಿ-3 ಎಂದು ಈಗಾಗಲೇ ಗುರುತಿಸಲಾಗಿದೆ ಎಂದು ನನ್ನ ಸಹಿಯನ್ನು ನಿಶಾನೆ ಪಿ-3(ಎ) ಎಂದು ಗುರುತಿಸಲಾಯಿತು. ಸದರಿ ದಿನದಂದು ಜಪ್ತು ಮಾಡಿದ ಲಾರಿ ನಂಬರ್: ಎಂಪಿ:09:ಕೆ:7011 ನದ್ದನ್ನು ಈಗ ನೋಡುತ್ತಿದ್ದು ಅದನ್ನು ಈಗಾಗಲೇ ಮುದ್ದೇಮಾಲು-1 ಎಂದು ಗುರುತಿಸಲಾಗಿದೆ ಎಂದು ಸಾಕ್ಷಿ ನುಡಿದಿರುವರು. ಸದರಿ ಈ ಸಾಕ್ಷಿದಾರರನ್ನು ವಾಹನದ ಮಾಲೀಕರಾಗಲೀ ಅವರ ಪರ ವಕೀಲರಾಗಲೀ ಪಾಟೀ ಸವಾಲು ಮಾಡಲು ಹಾಜರ ಇಲ್ಲದ ಕಾರಣ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಲಾಗಿದೆ.

ಪಿ.ಡಬ್ಲ್ಯೂ-4 ರಘು ಜೆ. ತಂದೆ ಜಯಣ್ಣ ಪಿರ್ಯಾಧಿದಾರರು ತಮ್ಮ ಸಾಕ್ಷಿಯಲ್ಲಿ ನಾನು 1999 ರಿಂದ 2001 ರ ಅಕ್ಟೋಬರ್‌ವರೆಗೆ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ ಸಂಚಾರಿ ಪೊಲೀಸ್ ಠಾಣೆ ಬಿಜಾಪುರದಲ್ಲಿ ಕೆಲಸ ಮಾಡಿದ್ದು ದಿನಾಂಕ: 16.07.2001ರಂದು ಮಧ್ಯಾಹ್ನ 2.30 ರ ಸುಮಾರಿಗೆ ನಾನು ಠಾಣೆಯಲ್ಲಿ ಇದ್ದಾಗ ಫೋನು ಮುಖಾಂತರ ಭಾತ್ಮಿ ಬಂದ ಪ್ರಕಾರ ನಾನು ನಮ್ಮ ಪೊಲೀಸ್ ಸರ್ಕಲ್ ಇನ್ಸ್‌ಪೆಕ್ಟರ್ ಮತ್ತು ಸಿಬ್ಬಂದಿಯವರ ಸಂಗಡ ಬಿಜಾಪುರದಲ್ಲಿರುವ ಜಮಖಂಡಿ ಕ್ರಾಸ್‌ನ ಹತ್ತಿರ ಹೋಗಿ ನಿಂತಿದ್ದು, ಒಂದು ಲಾರಿ ಬಬಲೇಶ್ವಬರ ನಾಕಾದ ಕಡೆಯಿಂದ ಅತೀ ಜೋರಾಗಿ ನಡೆಸುತ್ತಾ ಬಂದಿದ್ದು ನಾವು ಸಂಶಯ ಪಟ್ಟು ಸದರಿ ಗಾಡಿಯನ್ನು ನಿಲ್ಲಿಸಲು ಕೈ ಮಾಡಿದಾಗ ಸದರಿ ಗಾಡಿಯ ಚಾಲಕನು ಸ್ಥಳದಲ್ಲಿಯೇ ನಿಲ್ಲಸದೇ ಮುಂದೆ ತೆಗೆದುಕೊಂಡು ಹೊರಟಿದ್ದು ನಾವು ಅದರ ಬೆನ್ನು ಹತ್ತಿ ಗಾಡಿ ನಿಲ್ಲಿಸಿದ್ದೆವು. ಆಗ ನೋಡಲಾಗಿ ಗಾಡಿ ನಂಬರ್ ಎಂಪಿ:09:ಕೆ 7011 ಇತ್ತು. ಲಾರಿಯಲ್ಲಿ ಒಬ್ಬ ಡ್ರೈವರ್ ಹಾಗೂ ಕ್ಲೀನರ್ ಇದ್ದು ಅವರನ್ನು ವಿಚಾರಿಸಲಾಗಿ ಡ್ರೈವರ್ ಸುರಜಿತ್ ವಿಜಯಸಿಂಗ್ ರಘುವಂಶಿ ಸಾ: ಇಂಧೋರ ಅಂತ ಹಾಗೂ ಕ್ಲೀನರ್ ಮಹೇಶ್ ನಾನಾರಾಮ ಯಾಧವ ಸಾ: ಇಂಧೋರ ಅಂತ ಹೇಳಿದ್ದು ಸದರಿಯವರಿಗೆ ಗಾಡಿಯಲ್ಲಿ ಏನಿದೆ ಅಂತ ವಿಚಾರಿಸಲಾಗಿ ಸದರಿಯವರು

ಸಮರ್ಪಕ ಉತ್ತರ ಕೊಡಲಿಲ್ಲ. ಗಾಡಿಯ ಮೇಲೆ ಹೊಚ್ಚಿದ್ದಂತಹ ತಾಡಪತ್ರಿ ತೆಗೆಯಿಸಿ ನೋಡಲಾಗಿ ಗಾಡಿಯಲ್ಲಿ 60 ಬ್ಯಾರಲ್‌ಗಳು ಇದ್ದು ಅವು ಮುಚ್ಚಲ್ಪಟ್ಟಿದ್ದವು. ಅವುಗಳ ಮುಚ್ಚಳ ತೆಗೆದು ನೋಡಲಾಗಿ ಸ್ಪಿರೀಟ್ ತುಂಬಿದ್ದು ಕಂಡುಬಂದಿತು. ಚಾಲಕನಿಗೆ ಸ್ಪಿರೀಟ್ ತೆಗೆದುಕೊಂಡು ಹೋಗಲು ಪರ್ಮಿಟ್ ವಗೈರೆ ಇದೆಯೇ ಅಂತಾ ಕೇಳಲಾಗಿ ಅವನು ಇರುವುದಿಲ್ಲ ಅಂತ ಹೇಳಿದನು. ಸದರಿ ಲಾರಿ ಸಿಕ್ಕಾಗ ಮಧ್ಯಾಹ್ನ 3.30 ಆಗಿತ್ತು. ತಕ್ಷಣ ಸ್ಥಳಕ್ಕೆ ಇಬ್ಬರು ಪಂಚರನ್ನು ಕರೆಯಿಸಿ ವಿಷಯವನ್ನು ತಿಳಿಸಿ ಲಾರಿಯಲ್ಲಿದ್ದ ಬ್ಯಾರಲ್‌ಗಳಿಂದ ರಸಾಯನಿಕ ಮಾದರಿಗಾಗಿ ಪ್ರತಿಯೊಂದು ಬ್ಯಾರಲ್‌ನಿಂದ 180 ಮಿಲಿಯ ಬಾಟಲ್‌ಗಳಲ್ಲಿ ಸ್ಪಿರೀಟ್‌ನ್ನು ಮಾದರಿಗಾಗಿ ತೆಗೆದು ಕಛೇರಿಯ ಸೀಲಿನಿಂದ ಸೀಲು ಮಾಡಿ ನಾವು ಹಾಗೂ ಪಂಚರು ಸಹಿ ಮಾಡಿದ ಚೀಟಿಯನ್ನು ಅಂಟಿಸಲಾಯಿತು. ಲಾರಿ ಅದರಲ್ಲಿ ಇದ್ದಂತಹ 60 ಸ್ಪಿರೀಟ್ ತುಂಬಿದ ಬ್ಯಾರಲ್‌ಗಳನ್ನು ಜಪ್ತು ಮಾಡಿ ನಮ್ಮ ತಾಬಾಕ್ಕೆ ತೆಗೆದುಕೊಂಡು ಸವಿಸ್ತಾರವಾಗಿ ಸ್ಥಳ ಪಂಚನಾಮೆ ನಡೆಸಲಾಯಿತು. ಈಗ ಸದರಿ ಪಂಚನಾಮೆಯ ಪ್ರತಿಯನ್ನು ನೋಡುತ್ತಿದ್ದು ಅದನ್ನು ಈಗಾಗಲೇ ನಿಶಾನೆ ಪಿ-3 ಎಂದು ಗುರುತಿಸಲಾಗಿದ್ದು ಅದರಲ್ಲಿರುವ ನನ್ನ ಸಹಿಯನ್ನು ನಿಶಾನೆ ಪಿ-3(ಬಿ) ಎಂದು ಗುರುತಿಸಲಾಯಿತು. ಜಪ್ತು ಮಾಡಿದ ಲಾರಿ ನಂಬರ್: ಎಂಪಿ:09:ಕೆ 7011 ವನ್ನು ಈಗ ನೋಡುತ್ತಿದ್ದು ಇದನ್ನು ಈಗಾಗಲೇ ಮುದ್ದೇಮಾಲು-1 ಎಂದು ಗುರುತಿಸಲಾಗಿದೆ. ನಂತರ ಸುಮಾರು ಸಂಜೆ 5.00 ಗಂಟೆಗೆ ಗಾಂಧಿಚೌಕ ಪೊಲೀಸ್ ಠಾಣೆಗೆ ಬಂದು ಸರ್ಕಾರದ ಪರವಾಗಿ ಪಿರ್ಯಾಧನ್ನು ಸಲ್ಲಿಸಿ ಉಳಿದೆಲ್ಲಾ ದಾಖಲೆಗಳೊಂದಿಗೆ ಮತ್ತು ಮುದ್ದೇಮಾಲು ಹಾಗೂ ಇಬ್ಬರು ಆರೋಪಿತರೊಂದಿಗೆ ಸಲ್ಲಿಸಿದೆನೆಂದು ಸದರಿ ಪಿರ್ಯಾಧು ಪ್ರತಿಯನ್ನು ಈಗ ನೋಡುತ್ತಿದ್ದು ಅದನ್ನು ಈಗಾಗಲೇ ನಿಶಾನೆ ಪಿ-1 ಎಂದು ಗುರುತಿಸಲಾಗಿದ್ದು, ಅದರಲ್ಲಿರುವ ನನ್ನ ಸಹಿಯನ್ನು ನಿಶಾನೆ ಪಿ-1(ಎ) ಎಂದು ಗುರುತಿಸಲಾಗಿದೆ. ಸದರಿ ಈ ಸಾಕ್ಷಿಧರರ ಸಾಕ್ಷಿಯನ್ನು ಕೂಡಾ ವಾಹನದ ಮಾಲೀಕರು ಅವರ ಪರ ವಕೀಲರು ಹಾಜರು ಇಲ್ಲದ ಕಾರಣ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಲಾಗಿದೆ.

ಎ.ಡಿ.ಪಿ. ರವರು ಪ್ರಾಸಿಕ್ಯೂಶನ್‌ನ ಪರ ಸಾಕ್ಷಿಯನ್ನು ಮುಕ್ತಾಯಗೊಳಿಸಲಾಗಿದೆ ಎಂದು ತಿಳಿಸಿದರು. ಪ್ರಕರಣವನ್ನು ವಾದ- ವಿವಾದಕ್ಕೆ ಮಂಡಿಸಲಾಯಿತು. ಎ.ಡಿ.ಪಿ. ರವರು ತಮ್ಮ ವಾದವನ್ನು ಮಂಡಿಸಿದರು. ವಾಹನದ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಹಾಜರು ಇಲ್ಲದ್ದರಿಂದ ಯಾವುದೇ ಪ್ರತಿ ವಾದಗಳ ವಾದವಾಗಲೀ ಅಥವಾ ಸಾಕ್ಷ್ಯಾಧಾರಗಳಾಗಲೀ ಇಲ್ಲವೆಂದು ಪರಿಗಣಿಸಲಾಯಿತು.

ಪ್ರಾಸಿಕ್ಯೂಶನ್ ಪರ ಸಾಕ್ಷಿ ಹಾಗೂ ಎ.ಡಿ.ಪಿ. ರವರ ವಾದದ ಆಧಾರದ ಮೇಲೆ ಮುಂದಿನ ಆದೇಶ ಹೊರಡಿಸುವ ಮುನ್ನ ಕೆಳಕಂಡ ವಿವಾದಾಂಶಗಳಿಗೆ ಉತ್ತರವನ್ನು ಪಡೆಯಬೇಕಾಗಿರುತ್ತದೆ.

**ಮೊದಲನೆಯ ವಿವಾದಾಂಶ**

ದಿನಾಂಕ:16.07.2001 ರಂದು ಸದರಿ ವಾಹನದಲ್ಲಿ ಅಕ್ರಮವಾಗಿ ಮದ್ಯಸಾರ ಸಾಗಾಣಿಕೆಯಾಗಿದೆಯೇ? ಇದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 32, 34 ರೀತ್ಯಾ ಅಪರಾಧವಾಗಿದೆಯೇ? ಅಥವಾ ಇಲ್ಲಾ?

**ಎರಡನೆಯ ವಿವಾದಾಂಶ**

ಸದರಿ ವಾಹನದಲ್ಲಿ ಅನಧೀಕೃತವಾಗಿ ಮದ್ಯಸಾರ ಸಾಗಾಣಿಕೆಯಾಗಿರುವುದರ ಬಗ್ಗೆ ತನ್ನ ತಿಳುವಳಿಕೆಗೆ ಬಾರದೇ ಅಥವಾ ತಾನು ಶಾಮೀಲಾಗದೇ ನಡೆದಿದೆ ಎಂಬುದರ ಬಗ್ಗೆ ಅರ್ಜಿದಾರನಾಗಲೀ ಅಥವಾ ವಾಹನ ಚಾಲಕರಾಗಲೀ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ? ಅಥವಾ ಇಲ್ಲಾ?

**ಮೂರನೆಯ ವಿವಾದಾಂಶ**

ವಾಹನವು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಿಕ್ಕೆ ಯೋಗ್ಯವಾಗಿದೆಯೇ? ಅಥವಾ ಇಲ್ಲಾ?

**ಮೊದಲನೆಯ ವಿವಾದಾಂಶಕ್ಕೆ ಉತ್ತರ ಸಕಾರಾತ್ಮಕ (ಹೌದು)**

ಪಿರ್ಯಾಧಿದಾರರು ನೀಡಿರುವ ಸಾಕ್ಷಿಯನ್ನು ಗಮನಿಸಿದಾಗ ಮಹಜರದಲ್ಲಿ ಇರುವ ಅಂಶಗಳನ್ನು ಪ್ರಬಲವಾಗಿ ಸಮರ್ಥಿಸಿರುತ್ತಾರೆ. ಪಂಚರ ಸಾಕ್ಷಿಯು ಕೂಡಾ ಪಿರ್ಯಾಧಿಯ ಸಾಕ್ಷಿಗೆ ಪೂರಕವಾಗಿದೆ. ಅಲ್ಲದೇ ಪಿ.ಡಬ್ಲ್ಯೂ-2 ಸಿ.ಪಿ.ಸಿ. ರವರ ಸಾಕ್ಷಿಯೂ ಕೂಡಾ ಪಿರ್ಯಾಧಿದಾರರ ಸಾಕ್ಷಿಗೆ ಪೂರಕವಾಗಿರುತ್ತದೆ. ಪ್ರಕರಣದಲ್ಲಿ ಆರೋಪಿಸಿರುವ ಅಂಶವಾದ ಸದರಿ ವಾಹನದಲ್ಲಿ ಸಾಗಾಣಿಕೆ ಮಾಡಲ್ಪಟ್ಟಿದ್ದು ಮದ್ಯಸಾರ ಎಂಬುವುದು ರಸಾಯನಿಕ ವಿಶ್ಲೇಷಣಾ ವರದಿಯಿಂದ ದೃಢಪಟ್ಟಿರುತ್ತದೆ. ಮುಖ್ಯವಾಗಿ ವಾಹನದ ಮಾಲೀಕರು ಈ ಪ್ರಾಧಿಕಾರದ ಮುಂದೆ ದಿನಾಂಕ: 19.02.2002 ರಂದು ಒಂದು ಅರ್ಜಿಯನ್ನು ಸಲ್ಲಿಸಿ ಅದರಲ್ಲಿ ಸ್ವತಃ ಚಾಲಕರು ತಮ್ಮ ಫಾಯಿದೆಗೋಸ್ಕರ ಮದ್ಯಸಾರವನ್ನು ಅನಧೀಕೃತವಾಗಿ ಹೊಂದಿ ಸಾಗಾಣಿಕೆ ಮಾಡಿದ್ದು ಇರುತ್ತದೆ ಎಂಬುದನ್ನು ಒಪ್ಪಿಕೊಂಡಿರುತ್ತಾರೆ. ಅವುಗಳೆಲ್ಲ ಕಾರಣದಿಂದ ವಾಹನದಲ್ಲಿ ಮದ್ಯಸಾರವು ಸಾಗಾಣಿಕೆಯಾಗಿರುವುದು ಸ್ಪಷ್ಟವಾಗಿ ಸಾಭೀತಾಗಿದೆ. ಸದರಿ ವಾಹನದಲ್ಲಿ ಮದ್ಯಸಾರ ಸಾಗಿಸಿದ ಬಗ್ಗೆ ಎದುರುದಾರರಿಂದ ಯಾವುದೇ ರೀತಿಯ ಅಭ್ಯಂತರ ವ್ಯಕ್ತವಾಗಿರುವುದಿಲ್ಲ.

**ಎರಡನೆಯ ವಿವಾದಾಂಶಕ್ಕೆ ಉತ್ತರ ಇಲ್ಲ**

ಮೊದಲನೆಯ ವಿವಾದಾಂಶದಿಂದ ಪಡೆದ ಉತ್ತರದಲ್ಲಿ ಸದರಿ ವಾಹನದಲ್ಲಿ ಅನಧೀಕೃತವಾಗಿ ಮದ್ಯಸಾರ ಸಾಗಾಣಿಕೆಯಾಗಿರುವುದು ಸ್ಪಷ್ಟವಾಗಿ ಸಾಭೀತಾಗಿದೆ. ಪಿ.ಡಬ್ಲ್ಯೂ-2 ತನ್ನ ಸಾಕ್ಷಿದಲ್ಲಿ ವಾಹನ ಚಾಲಕನಿಗೆ ಜಪ್ತು ಮಾಡಿದ ಮದ್ಯಸಾರ ಈ ವಾಹನ ಮಾಲೀಕರಿಗೆ ತಿಳಿದಿದೆಯೋ ಅಥವಾ ಇಲ್ಲವೋ ಎಂದು ನಮ್ಮ ಅಧಿಕಾರಿಗಳು ಕೇಳಲಾಗಿ ಸದರಿ ಮದ್ಯಸಾರ ಮಾಲೀಕರ ಆದೇಶದ ಮೇರೆಗೆ ತಂದಿರುವುದಾಗಿ ತಿಳಿಸಿರುತ್ತಾರೆ ಎಂದು ಸಾಕ್ಷಿ ನುಡಿದಿರುವರು. ಇಂಧೋರಿಂದ ಕರ್ನಾಟಕದ ಬಿಜಾಪುರಕ್ಕೆ ಒಂದು ಲಾರಿ ಮುಟ್ಟಲು ಸುಮಾರು ಎರಡು ದಿನಗಳು ಬೇಕಾಗುತ್ತಿದ್ದು ಒಂದು ಪಕ್ಷದಲ್ಲಿ ಅರ್ಜಿದಾರರು ತಮ್ಮ ಅರ್ಜಿಯಲ್ಲಿ ತಿಳಿಸಿರುವಂತೆ ಚಾಲಕನೆ ತನ್ನ ಫಾಯಿದೆಗೋಸ್ಕರ ಮದ್ಯಸಾರವನ್ನು ಸಾಗಿಸುತ್ತಿರುವುದು ನಿಜವಾಗಿದ್ದಲ್ಲಿ ಸದರಿ ಆ ವೇಳೆಯಲ್ಲಿ ಮಾಲೀಕರು ತನ್ನ ಚಾಲಕ ತನ್ನ ಅನುಮತಿ ಇಲ್ಲದೆಯೇ ತನ್ನ ವಾಹನವನ್ನು ತೆಗೆದುಕೊಂಡು ಹೋಗಿರುವುದರ ಬಗ್ಗೆ ಪೊಲೀಸ್ ಠಾಣೆಯಲ್ಲಾಗಲೀ ಅಥವಾ ಇನ್ನಿತರ ಯಾವುದೇ ಅಧಿಕಾರಿಗಳ ಮುಂದೆ ದೂರನ್ನು ಸಲ್ಲಿಸಿದ ಬಗ್ಗೆ ದಾಖಲೆಗಳನ್ನು ಈ ಪ್ರಾಧಿಕಾರದ ಮುಂದೆ ಹಾಜರುಪಡಿಸಿರುವುದಿಲ್ಲ. ಆದಕಾರಣ ಮಾಲೀಕರಿಂದಲೇ ವಾಹನದಲ್ಲಿ ಅನಧೀಕೃತವಾಗಿ ಮದ್ಯಸಾರವು ಸಾಗಾಣಿಕೆಯಾಗಿರುತ್ತದೆ ಎಂಬುದು ಸಂದೇಹಾತೀತವಾಗಿ ರುಜುವಾತ ಆಗಿದೆ. ಇದನ್ನು ಅಲ್ಲಗಳೆಯಲು ವಾಹನದ ಮಾಲೀಕರು ತನ್ನ ಪರ ಯಾವುದೇ ಸಾಕ್ಷ್ಯಾಧಾರಗಳನ್ನು ಸಲ್ಲಿಸಿರುವುದಿಲ್ಲ.

ನಿಯಮ 43(ಬಿ) (2) ರನ್ವಯ ಸ್ವತಃ ವಾಹನದ ಮಾಲೀಕ ಅಥವಾ ಅವರ ಪ್ರತಿನಿಧಿ ಮತ್ತು ವಾಹನ ಯಾರ ವಶದಲ್ಲಿತ್ತೋ ಆತನು ವಿವರಗಳು ವಾಹನದಲ್ಲಿ ಮದ್ಯ ಅಥವಾ ಅಮಲಿನ ಪದಾರ್ಥ ಸಾಗಾಣಿಕೆಯಾಗಿರುವುದರ ಬಗ್ಗೆ ತಮ್ಮಗಳ ಗಮನಕ್ಕೆ ಬಾರದೇ ಅಥವಾ ಶಾಮೀಲಾಗದೇ ಈ ಕೃತ್ಯವು ಸಂಭವಿಸಿದೆ. ಮತ್ತು ಇಂತಹ ಉಪಯೋಗದ ವಿರುದ್ಧ ತಾವು ಪ್ರತಿಯೊಬ್ಬರು ಎಲ್ಲ ರೀತಿಯ ಸಕಾರಣವಾದ ಮತ್ತು ಅಗತ್ಯವಾದ

ಮಂಜೂರಾತಿಯನ್ನು ತೆಗೆದುಕೊಂಡಿರುವುದರ ಬಗ್ಗೆ ಅಧೀಕೃತ ಅಧಿಕಾರಿಗಳಿಗೆ ತೃಪ್ತಿಕರವಾಗಿ ಸಾಭೀತು ಪಡಿಸಬೇಕಾಗಿರುತ್ತದೆ. ಆದರೆ ವಾಹನ ಮಾಲೀಕರು ತಮ್ಮ ಹೇಳಿಕೆಯಿಂದಾಗಲೀ ಅಥವಾ ಸಾಕ್ಷ್ಯಾಧಾರಗಳಿಂದಾಗಲೀ ತಮ್ಮ ಹೊಣೆಗಾರಿಕೆಯನ್ನು ಈ ಪ್ರಾಧಿಕಾರಕ್ಕೆ ತೃಪ್ತಿಕರವಾಗಿ ಸಾಭೀತು ಪಡಿಸಿರುವುದಿಲ್ಲ.

**ಮೂರನೇ ವಿವಾದಾಂಶಕ್ಕೆ ಉತ್ತರ ಹೌದು**

ಮೂರನೇ ಮತ್ತು ಎರಡನೇಯ ವಿವಾದಾಂಶದಿಂದ ಪಡೆದ ಉತ್ತರದಿಂದ ಪ್ರಕರಣದಲ್ಲಿ ಜಪ್ತು ಮಾಡಲ್ಪಟ್ಟ ವಾಹನವು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿ ಕಂಡುಬಂದಿರುವುದರಿಂದ ಈ ಕೆಳಕಂಡಂತೆ ಆದೇಶ.

**ಆದೇಶ**

ಶ್ರೀ ಕೆ.ಆರ್. ಗೌಡ್ರ, ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು ಇ.ಐ.ಬಿ. ಬಿಜಾಪುರ ಜಿಲ್ಲೆ, ಬಿಜಾಪುರ ಆದ ನಾನು, ಕರ್ನಾಟಕ ಅಬಕಾರಿ ಅಧಿನಿಯಮ 1965ರ ನಿಯಮ 43(ಎ) ನಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ನಿಯಮ 43(ಎ)2 ರನ್ವಯ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ ಗಾಂಧಿಚೌಕ ಪೊಲೀಸ್ ಠಾಣೆ ಬಿಜಾಪುರ ಇವರ ಗುನ್ನೆ ನಂಬರ್: 241/2001ರಲ್ಲಿ ಜಪ್ತು ಮಾಡಲ್ಪಟ್ಟ ಲಾರಿ ನಂಬರ್: ಎಂಪಿ:09:ಕೆ:7011 ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿದ್ದೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ:03.02.2006 ರಂದು ಶೀಘ್ರಲಿಪಿಗಾರರಿಗೆ ಉಕ್ತಲೇಖನ ಕೊಟ್ಟು ಗಣಕ ಯಂತ್ರದಲ್ಲಿ ಬೆರಳಚ್ಚು ಮಾಡಿದ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಅಮಲಿನಲ್ಲಿ ಬರುವುದು.

**ಕೆ.ಆರ್. ಗೌಡ್ರ**
ಪ್ರಾಧೀಕೃತ ಅಧಿಕಾರಿ ಹಾಗೂ
ಅಬಕಾರಿ ಅಧೀಕ್ಷಕರು ಇ.ಐ.ಬಿ.
ಬಿಜಾಪುರ ಜಿಲ್ಲೆ, ಬಿಜಾಪುರ.

**ಅನುಬಂಧ-1**

**ಪಿರ್ಯಾಧಿದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ**

| | | |
|---|---|---|
| ಪ್ರಾ.ಸಾ-1 | ಮಲ್ಲಿಕಾರ್ಜುನ ತಂದೆ: ಸಿದ್ರಾಮಪ್ಪ ಬುಳಕ್ಕಣ್ಣವರ ಪೊಲೀಸ್ ಸರ್ಕಲ್ ಇನ್ಸ್‌ಪೆಕ್ಟರ್ ಗಾಂಧಿಚೌಕ ಪೊಲೀಸ್ ಠಾಣೆ, ಬಿಜಾಪುರ. | ತನಿಖಾಧಿಕಾರಿ |
| ಪ್ರಾ.ಸಾ-2 | ವಿವೇಕಾನಂದ ಹನುಮಂತ್ರಾಯ ಹತ್ತಳ್ಳಿ, ಸಿವಿಲ್ ಪೊಲೀಸ್ ಕಾನ್ಸ್‌ಟೇಬಲ್. | ಪ್ರತ್ಯೇಕ ಸಾಕ್ಷಿ |
| ಪ್ರಾ.ಸಾ-3 | ಮಲ್ಲಪ್ಪ ಈರಪ್ಪ ಕುಂಬಾರ ಹಮಾಲರ ಕಾಲನಿ, ಬಿಜಾಪುರ. | ಪಂಚರು |
| ಪ್ರಾ.ಸಾ-4 | ರಘು ಜಿ. ಪೊಲೀಸ್ ಸಬ್ ಇನ್ಸ್‌ಪೆಕ್ಟರ್, ಗಾಂಧಿಚೌಕ ಪೊಲೀಸ್‌ಠಾಣೆ, ಬಿಜಾಪುರ. | ಪಿರ್ಯಾಧಿದಾರರು |

**ಅನುಬಂಧ-2**

**ಪಿರ್ಯಾಧಿದಾರರ ಪರಮಂಡಿಸಲಾದ ದಾಖಲೆಗಳು**

| | |
|---|---|
| ನಿಶಾನೆ ಪಿ-1 | ಪಿರ್ಯಾಧಿ ಪತ್ರ. |
| ನಿಶಾನೆ ಪಿ-1(ಎ) | ಪ್ರಾ.ಸಾ. -4 ರವರ ಸಹಿ |
| ನಿಶಾನೆ ಪಿ-2 | ಪ್ರಥಮ ವರ್ತಮಾನ ವರದಿ |
| ನಿಶಾನೆ ಪಿ-3 | ಪಂಚನಾಮೆ ಪ್ರತಿ |
| ನಿಶಾನೆ ಪಿ-3(ಎ) | ಪಂಚರ ಸಹಿ |
| ನಿಶಾನೆ ಪಿ-3 (ಬಿ) | ಪ್ರಾ.ಸಾ-4ರವರ ಸಹಿ |
| ನಿಶಾನೆ ಪಿ-4 | ರಸಾಯನಿಕ ತಜ್ಞರ ವರದಿ. |

**ಅನುಬಂಧ-3**

**ಪಿರ್ಯಾಧಿದಾರರ ಪರ ಗುರುತಿಸಲಾದ ವಸ್ತುಗಳು**

1) ಎಂ.ಓ-1 ವಾಹನ ನಂಬರ್: ಎಂಪಿ:09:ಕೆ:7011.
2) ಎಂ.ಓ. -2 ಮಾದರಿ ಮದ್ಯಸಾರದ ಬಾಟಲ್‌ಗಳು.

**ಅನುಬಂಧ-4**

**ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು.**

-ಇಲ್ಲಾ-

**ಅನುಬಂಧ-5**

**ವಾಹನದ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು**

-ಇಲ್ಲಾ-

**ಕೆ.ಆರ್. ಗೌಡ್ರ**
ಅಧಿಕೃತ ಅಧಿಕಾರಿ ಹಾಗೂ
ಅಬಕಾರಿ ಅಧೀಕ್ಷಕರು ಇ.ಐ.ಬಿ.
ಬಿಜಾಪುರ ಜಿಲ್ಲೆ, ಬಿಜಾಪುರ.

ಪಿ.ಆರ್.526